# ಸಾಂಗತ್ಯ

ತಿಂಗಳ ಪತ್ರಿಕೆ
ಏಪ್ರಿಲ್ : 2001

ಶಿವಪುರಿ ಘಟನೆ - ಸತ್ಯ ಶೋಧಕ ಸಮಿತಿಯ ವರದಿ

ವಚನ ಸಂಸ್ಕೃತಿಯ ಜೈವಿಕ ನಿಯತಿ ಮತ್ತು ಸಾಮಾಜಿಕ ಆಯಾಮಗಳು: ಒಂದು ಲಿಂಗ ಸಂಬಂಧಿ ಅಧ್ಯಯನ

'ದಂಡೆ' : ಸ್ತ್ರೀಯರ ಸಂಕಥನ

ದಿಟ್ಟ ಹೆಜ್ಜೆ

// ಮಾನಸ

ತಿಂಗಳ ಪತ್ರಿಕೆ

ಸಂಪುಟ : 19 ಸಂಚಿಕೆ : 2

ಏಪ್ರಿಲ್ : 2001



ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **4-00** ರೂ.

ವಾರ್ಷಿಕ ಚಂದಾ **50-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು

## *ಈ ಸಂಚಿಕೆಯಲ್ಲಿ......*





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067



# ಸಂಪಾದಕೀಯ

ಶಿವಪುರಿಯ ಗಾಯತ್ರಿಯವರ ಬಂಧನ, ಅತ್ಯಾಚಾರ ಇವುಗಳು ಮಹಿಳೆಯರ ಮೇಲೆ ನಡೆಯುತ್ತಿರುವ ಪೊಲೀಸರ ದೌರ್ಜನ್ಯಕ್ಕೆ ಇಂದು ಸಾಕ್ಷಿಯಾಗಿವೆ. ಇಲ್ಲಿಯ ಸಾಮಾನ್ಯ ಮಹಿಳೆಯೇಕೆ, ರಾಜಕೀಯದ ಬಲವಿರದ ಯಾವುದೇ ಮಹಿಳೆ ಪೊಲೀಸರ ವಿಷಚಕ್ರದಲ್ಲಿ ಸಿಕ್ಕಿಹಾಕಿಕೊಂಡರೆ ಅಲ್ಲಿಗೆ ಅವಳ ಸರ್ವನಾಶವಾಗುತ್ತದೆ. ಭಾರತದ ಸ್ವಾಯತ್ತ ಮಹಿಳಾ ಚಳುವಳಿ ಮಥುರಾ, ಮಾಯತ್ಯಾಗಿ, ರಮೀಜಾಬಿಯವರ ಘಟನೆಗಳ ಮುಖಾಂತರ ಭಾರತದಾದ್ಯಂತ ಪೊಲೀಸರ ದೌರ್ಜನ್ಯದ ಬಗ್ಗೆ, ಪೊಲೀಸ್ ಠಾಣೆಯಲ್ಲಿ ನಡೆಯುವ ಅತ್ಯಾಚಾರದ ಬಗ್ಗೆ, 70ರ ದಶಕದಲ್ಲಿ ಬಲವಾದ ಧ್ವನಿ ಎತ್ತಿ ಆಂದೋಲನದ ಬಿಸಿ ಬ್ಯುರೋಕ್ರಸಿಗೆ ತಟ್ಟುವಂತೆ ಮಾಡುವಲ್ಲಿ ಸಫಲವಾಗಿತ್ತು. ಆದಾಗ್ಯೂ ಗಾಯತ್ರಿಯಂತಹ ಹಲವಾರು ಮಹಿಳೆಯರು ಪೊಲೀಸರ ದೌರ್ಜನ್ಯದಲ್ಲಿ ನರಳುತ್ತಿರುವುದು ವಿಪರ್ಯಾಸವೇ ಸರಿ.

'ಜೆಂಡರ್ ಸೆನ್ಸಿಟೈಜೇಶನ್' ಎಂದು ಸರ್ಕಾರಗಳು ಕೂಗಿ ಗದ್ದಲವೆಬ್ಬಿಸುತ್ತಲೇ ಪೊಲೀಸ್ ಇಲಾಖೆಯ ಒಳಗಡೆ ಹಲವಾರು ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಲೇ ಇವೆ. ಮಹಿಳಾ ಪೊಲೀಸ್ ಸ್ಟೇಷನ್, ಮಹಿಳಾ ಕೌನ್ಸಿಲಿಂಗ್ ಇತ್ಯಾದಿಗಳು ಮಹಿಳೆಯರನ್ನು ರಕ್ಷಿಸಲು ತಲೆ ಎತ್ತುತ್ತಲೇ ಇವೆ. ಆದರೆ ಸರ್ಕಾರದ ಇಂತಹ ಘೋಷಣೆ, ಗದ್ದಲಗಳ ಮುಸುಕಿನಡಿಯಲ್ಲಿಯೇ ಗಾಯತ್ರಿಯಂಥವರು ಪೊಲೀಸರ ಕಪಿಮುಷ್ಠಿಯಲ್ಲಿ ಅಸಹಾಯಕರಾಗುತ್ತಿದ್ದಾರೆ. ಇದು ಸರ್ಕಾರಗಳ ಇಬ್ಬಗೆಯ ನೀತಿಗೆ ಸಾಕ್ಷಿಯಾಗಿದೆ. ಇಂತಹ ಘಟನೆ ನಡೆದಾಗ ಆ ರಾಜ್ಯದ ಸರ್ಕಾರ ಸಂಬಂಧಪಟ್ಟವರನ್ನು ತಕ್ಷಣವೇ ಅಮಾನತ್ತಿನಲ್ಲಿಡಬೇಕು, ತನಿಖೆ ನಿಷ್ಪಕ್ಷಪಾತವಾಗಿ ನಡೆಯುವಂತೆ ಮಾಡಬೇಕು.

ಆದರೆ ಹೀಗೆ ನ್ಯಾಯವಾದ ಯಾವುದೂ ಇಲ್ಲಿ ನಡೆಯುವುದಿಲ್ಲ ಎಂದೇ ಜನ ಕಾನೂನು, ಪೊಲೀಸ್ ಎಂದರೆ ಭಯ ಬಿದ್ದು ಓಡುವಂತಾಗಿದೆ. ನಮ್ಮ ದೇಶದಲ್ಲಿ ಸಾರ್ವಜನಿಕ ಪ್ರಾಮಾಣಿಕತೆಯನ್ನು ಹೆಚ್ಚಿಸುವುದೊಂದೇ ಜನರ ನ್ಯಾಯದ ಬಗ್ಗೆಗಿನ ಕಾಳಜಿಯನ್ನು ಹೆಚ್ಚಿಸಬಹುದು. ಎಲ್ಲಿಯತನಕ ಸಾರ್ವಜನಿಕ ಕರ್ತವ್ಯ, ನಡತೆಗಳ ಬಗ್ಗೆ ನಿಷ್ಠೆ ಬೆಳೆಯುವುದಿಲ್ಲವೋ ಅಲ್ಲಿಯವರೆಗೆ ಸರ್ಕಾರದ ಘೋಷಣೆ, ಕ್ರಿಯೆಗಳೆಲ್ಲವೂ ಒಂದು ಚಳುವಳಿಯನ್ನು ಬುಟ್ಟಿಗೆ ಹಾಕಿಕೊಳ್ಳುವ ತಂತ್ರಗಳಾಗಿರುತ್ತವೆ. ಒಂದು ಪಂಗಡದ ಓಟುಗಳನ್ನು ಗಿಟ್ಟಿಸಿಕೊಳ್ಳುವುದಕ್ಕೆ ಮಾತ್ರ ಸರ್ಕಾರಗಳು ಪ್ರಯತ್ನಿಸುತ್ತಿರುತ್ತವೆ ಎಂಬುದಕ್ಕೆ ಶಿವಪುರಿಯ ಗಾಯತ್ರಿಯ ಘಟನೆ ಸಾಕ್ಷಿಯಾಗಿ ನಮ್ಮೆದುರಿಗೆ ನಿಂತಿದೆ.

○ *ಸಂಪಾದಕೀಯ ಮಂಡಳಿ*

# ಶಿವಪುರಿ ಘಟನೆ - ಸತ್ಯ ಶೋಧಕ ಸಮಿತಿಯ ವರದಿ

ಡಿಸೆಂಬರ್ 21, 1999ರಂದು ಮದರ್‌ಪುರದಲ್ಲಿ ಗಾಯತ್ರಿ ಶರ್ಮ ಮತ್ತವರ ಕುಟುಂಬದವರನ್ನು ಅಲ್ಲಿನ ಕಲೆಕ್ಟರ್, SDOP, ರಾಣಾ ಇನ್ ಚಾರ್ಜ್‌ಗಳು ಸುಳ್ಳು ಆರೋಪ ಹೊರಿಸಿ ಠಾಣೆಗೆ ಒಯ್ದು ಅಮಾನುಷವಾಗಿ ಹಿಂಸಿಸಿ, ಗಾಯತ್ರಿಯವರ ಮೇಲೆ ಅತ್ಯಾಚಾರವೆಸಗಿದರು. ನಂತರ ಅವರನ್ನು ನಾಲ್ಕು ತಿಂಗಳ ಕಾಲ ವಿನಾಕಾರಣ ಜೈಲಿನಲ್ಲಿರಿಸಲಾಯ್ತು. ಜೈಲಿನಿಂದ ಹೊರ ಬಂದ ಮೇಲೆ ಗಾಯತ್ರಿಯವರು ಆರೋಪಿಗಳ ವಿರುದ್ಧ ದೂರು ನೀಡಿದ್ದು ಮೊಕದ್ದಮೆ ಕೋರ್ಟಿನಲ್ಲಿದೆ. ತಾವು ನಡೆಸುತ್ತಿರುವ ಹೋರಾಟಕ್ಕಾಗಿ C.C.V.A.W. (Coalitation againt Custodial violence against women ಮಹಿಳೆಯರ ಮೇಲೆ ಠಾಣೆಗಳಲ್ಲಿ ನಡೆಯುವ ಹಿಂಸೆಯ ವಿರುದ್ಧ ಹೋರಾಡುತ್ತಿರುವ ಒಂದು ಒಕ್ಕೂಟ) C.C.V.A.W ನವರು ಒಂದು ಸತ್ಯ ಶೋಧಕ ಸಮಿತಿ ರಚಿಸಿ, ಘಟನೆಯ ಕುರಿತು ಸ್ಥಳಕ್ಕೆ ಭೇಟಿ ನೀಡಿ ಸಂಬಂಧ ಪಟ್ಟವರನ್ನೆಲ್ಲ ಭೇಟಿ ಮಾಡಿ ಮಾಹಿತಿಯನ್ನು ಒಟ್ಟು ಮಾಡಿ ವರದಿಯನ್ನು ತಯಾರಿಸಿದ್ದಾರೆ. ಸತ್ಯ ಶೋಧಕ ಸಮಿತಿಯಲ್ಲಿ ಶ್ರೀಮತಿ ಚಿತ್ರೂಪ ಪಲಿತ್, ನರ್ಮದಾ ಬಚಾವ್ ಆಂದೋಲನ, ಶಮೀಮ್ ಮೇಘುನಿ, ಶ್ರಮಿಕ್ ಆದಿವಾಸಿ ಸಂಘಟನೆ, ಮಧ್ಯ ಪ್ರದೇಶ ಮಹಿಳಾಮಂಚ್, ಹೊಮಾಶೇಖಬ್ ಖಾನ್, ವನಜನ, ಶಾಲಿನಿ ಶಾಂಭೋಚ್ (C.C.V.A.Wನ ಸದಸ್ಯ ಕಾರ್ಯದರ್ಶಿ) ಶಾಲಿನ ಗೋನ್ ಸಾಲ್‌ವೆಸ್ ಇದ್ದಾರೆ. ಈ ಸಮಿತಿ ತಂದಿರುವ ವರದಿಯನ್ನು ಸಂಕ್ಷಿಪ್ತವಾಗಿ ಮಾನಸ ಓದುಗರಿಗಾಗಿ ಅನುವಾದಿಸಿ ಪ್ರಕಟಿಸಿದ್ದೇವೆ.

ಮದರ್‌ಪುರ, ಮಧ್ಯಪ್ರದೇಶದ ಶಿವಪುರಿ ಜಿಲ್ಲೆಯಲ್ಲಿರುವ ಒಂದು ಹಳ್ಳಿ. ಈ ಹಳ್ಳಿಯವರಾದ ಗಾಯತ್ರಿ ಶರ್ಮ ತನ್ನ ತಂದೆ ತಾಯಿ ತಂಗಿಯರು, ತಮ್ಮಂದಿರು ಮತ್ತು ಒಬ್ಬ ಮಗನೊಂದಿಗೆ ವಾಸವಾಗಿದ್ದಾರೆ. ಆಕೆಯ ಸಹೋದ್ಯೋಗಿ ಮತ್ತು ಸಹಾಯಕ ಸಂಜಯ್‌ಶರ್ಮಾ ಕೂಡ ಅವರ ಕುಟುಂಬದವರೊಂದಿಗಿದ್ದರು. ಗಾಯತ್ರಿಯವರಿಗೆ ಮದುವೆಯಾಗಿದ್ದು, 6 ವರ್ಷಗಳ ಹಿಂದೆ ವಿಚ್ಛೇದನ ಪಡೆದುಕೊಂಡು ತನ್ನ ಕುಟುಂಬದವರೊಟ್ಟಿಗೆ ವಾಸಿಸುತ್ತಿದ್ದಾರೆ.

ಗಾಯತ್ರಿಯವರು ಸಾಮಾಜಿಕ ಕಾರ್ಯಕರ್ತೆಯಾಗಿದ್ದು ಮಹಿಳೆಯರಿಗಾಗಿ ರಿಹಾಯಿ ಎಂಬ ಸಂಸ್ಥೆಯನ್ನು ನಡೆಸುತ್ತಿದ್ದರು. ಇನ್ನಿಬ್ಬರು ಸಹೋದ್ಯೋಗಿಗಳೊಟ್ಟಿಗೆ ಸುತ್ತ ಮುತ್ತಲಿನ ಹಳ್ಳಿಗಳಲ್ಲಿನ ಮಹಿಳೆಯರನ್ನು ಸಂಘಟಿಸುವ ಕಾರ್ಯ ಮಾಡುತ್ತಿದ್ದರು. ಸರ್ಕಾರೇತರ ಸಂಸ್ಥೆಯೊಂದರ ಫೆಲೋಶಿಪ್ ಅವರಿಗೆ ದೊರೆತಿದ್ದು ಅದರಿಂದ ತಿಂಗಳಿಗೆ 6 ಸಾವಿರ ರೂ. ಸಂಬಳ ಪಡೆಯುತ್ತಿದ್ದರು. ಆಕೆಯ ಕುಟುಂಬದವರಿಗೆ 9ರಿಂದ12 ಎಕರೆ ಜಮೀನಿದೆ. ಈ ಜಮೀನನ್ನು ಗಾಯತ್ರಿಯವರು ತಂದೆಯ ಅಣ್ಣನಿಂದ ಖರೀದಿಸಿದ್ದರು. 1958 ರಿಂದಲೂ ಆ ಜಮೀನು ಅವರ ಹೆಸರಿನಲ್ಲಿದೆ. ಗಾಯತ್ರಿಯವರ ತಂದೆ ದೊಡ್ಡ ಸ್ವಾತಂತ್ರ್ಯ ಹೋರಾಟಗಾರರಾಗಿದ್ದು ಸುತ್ತ ಮುತ್ತಲಲ್ಲಿ ಒಳ್ಳೆಯ ಹೆಸರು ಪಡೆದ ವ್ಯಕ್ತಿಯಾಗಿದ್ದರು. ಗಾಯತ್ರಿಯ ಮನೆಯವರು ವ್ಯವಸಾಯವಲ್ಲದೆ, ಹಸು, ಎಮ್ಮೆಗಳನ್ನು ಸಾಕಿಕೊಂಡು ಹಾಲಿನ ವ್ಯಾಪಾರವನ್ನು ಮಾಡಿಕೊಂಡಿದ್ದರು. ಜೊತೆಗೆ ಸಣ್ಣದೊಂದು ದಾಬಾವನ್ನು ನಡೆಸುತ್ತಿದ್ದರು. ಕುಟುಂಬಕ್ಕೆ ಬೇಕಾದ ಆಹಾರ ಧಾನ್ಯವನ್ನು ಅವರೆ ಬೆಳೆಯುತ್ತಿದ್ದರು. ಅಲ್ಲದೆ ತಾವು ಬೆಳೆದ ತರಕಾರಿಯನ್ನು ಮಾರಾಟಮಾಡಿ ದಿನಕ್ಕೆ 500 ರಿಂದ 600ರೂ., ಹಾಲಿನ ವ್ಯಾಪಾರದಿಂದ ದಿನಕ್ಕೆ 200 ರಿಂದ 400 ರೂ., ಡಾಬಾದಿಂದ ದಿನಕ್ಕೆ 200 ರೂ. ಸಂಪಾದನೆಯಾಗುತ್ತಿತ್ತು. ಗಾಯತ್ರಿಯ ತಂಗಿ ಗೀತಾ ಬೆಲ್ಲಾ ಅರಣ್ಯ ಇಲಾಖೆಯಲ್ಲಿ ಹಂಗಾಮಿ ನೌಕರಿಯಲ್ಲಿದ್ದು ರೂ. 2000/- ಸಂಬಳ ಪಡೆಯುತ್ತಿದ್ದರು. ಗಾಯಿತ್ರಿಯ 5 ಜನ ತಮ್ಮಂದಿರು ಸ್ಕೂಲು, ಕಾಲೇಜುಗಳಲ್ಲಿ ಓದುತ್ತಿದ್ದಾರೆ. ತಂದೆ ತಾಯಿಯರಿಗೆ ವಯಸ್ಸಾಗಿದೆ. ಆರ್ಥಿಕವಾಗಿ ಯಾವ ತೊಂದರೆ ಇಲ್ಲದೆ ಅನುಕೂಲಕರವಾಗಿದ್ದರು. ಗಾಯತ್ರಿಯ ತಂಗಿಯರಾದ ಉಷಾ ಮತ್ತು ವಿಮಲಾರ ಮದುವೆ ನಿಶ್ಚಯವಾಗಿತ್ತು. ಡಿಸೆಂಬರ್ 24ರಂದು ನಿಶ್ಚಿತಾರ್ಥ ನಡೆಯಲಿತ್ತು.

***ಡಿಸೆಂಬರ್ 21ರಂದು ಮಧ್ಯಾಹ್ನ ನಡೆದ ಘಟನೆ ನೆಮ್ಮದಿಯಾಗಿದ್ದ ಕುಟುಂಬವನ್ನು ಧೂಳಿಪಟ ಮಾಡಿತು. ಈ ಘಟನೆಯಿಂದ ಇಡೀ ಕುಟುಂಬವೇ ತತ್ತರಿಸಿ ಹೋಗಿದೆ, ಮುಂದೇನಾಗಬಹುದೆಂಬ ಆತಂಕದಲ್ಲಿ ದಿನ ದೂಡುವಂತಾಗಿದೆ.***

ಆದರೆ ಆ ದಿನ ನಡೆದ ಘಟನೆಯಾದರೂ ಏನು?

ಅಂದು ಮಧ್ಯಾಹ್ನ 1 ಗಂಟೆಯ ಸಮಯ. ಹೈವೆಯಲ್ಲಿ ರಭಸವಾಗಿ ಬರುತ್ತಿದ್ದ ಟ್ರಕ್‌ವೊಂದು ಗಾಯಿತ್ರಿ ಮನೆಯ ಜೆರ್ಸಿ ಹಸುವಿಗೆ ಡಿಕ್ಕಿಹೊಡೆಯಿತು. ಇದನ್ನು ಕಂಡು ಅಲ್ಲಿದ್ದ ಜನ ಟ್ರಕ್ ಡ್ರೈವರ್ ಚೋಟೆಲಾಲ್ ಮತ್ತು ಕ್ಲೀನರ್ ವೀರೇಂದ್ರನನ್ನು ಹಿಡಿದು ಬಡಿದರು. ಗಲಾಟೆಯ ಶಬ್ದ ಕೇಳಿ ಉಷಾ ವಿಮಲ ಓಡಿ ಬಂದರು. ಅವರ ಹಸು ತೀವ್ರವಾಗಿ ಗಾಯಗೊಂಡಿತ್ತು (ನಂತರ ಹಸು ಸತ್ತುಹೋಯಿತು)

ಹೊಡೆದಾಟ ಕಂಡ ಇವರಿಬ್ಬರು ನಡುವೆ ಬಂದು 'ಡ್ರೈವರನ್ನು ಪೊಲೀಸರಿಗೆ ಒಪ್ಪಿಸುವ, ಹೊಡೆಯಬೇಡಿ' ಎಂದು ಜನರನ್ನು ತಡೆದರು. ಗಲಾಟೆ ತಣ್ಣಗಾಯಿತು. ಆ ಸಮಯದಲ್ಲಿ ಪೊಲೀಸ್ ಜೀಪನ್ನು ಕಂಡು ಉಷಾ, ವಿಮಲ ಜೀಪನ್ನು ನಿಲ್ಲಿಸಲು ಪ್ರಯತ್ನಿಸಿದರು. ಆದರೆ ಪ್ರಯೋಜನವಾಗಲಿಲ್ಲ. 10 ನಿಮಿಷಗಳ ನಂತರ ಮತ್ತೊಂದು ಜೀಪು ಮತ್ತೊಂದು ಬದಿಯಿಂದ ಬಂತು. ಜೀಪಿನಲ್ಲಿದ್ದ ಠಾಣಾ ಇನ್‌ಚಾರ್ಜ್ ಅಲ್ಲಿಗೆ ಬಂದರು. ಬಂದವರೆ ಸರಿಯಾಗಿ ವಿಚಾರಿಸುವ ಮೊದಲೇ ಡ್ರೈವರ್‌ನನ್ನು ಹೊಡೆದಿರುವಳೆಂದು ಉಷಾಳನ್ನು ಥಳಿಸಿದ. ತಾನು ಹೊಡೆಯಲಿಲ್ಲವೆಂದು ಹೇಳಿದರೂ ಕೇಳಲಿಲ್ಲ. ವಿಮಲ ನಡುವೆ ಮಾತಾಡಲು ಬಂದಾಗ ಆಕೆಯನ್ನು ಥಳಿಸಿದ. ಸರಿಯಾದ ವಿಚಾರಣೆಯಾಗದೆ ಅಲ್ಲಿ ಪೊಲೀಸರು ಮತ್ತು ಗಾಯತ್ರಿ ಕುಟುಂಬದವರ ನಡುವೆ ವಾಗ್ವಾದ ಏರ್ಪಟ್ಟಿತು. ಅದೇ ಸಮಯದಲ್ಲಿ ಆ ದಾರಿಯಲ್ಲಿ ಬರುತ್ತಿದ್ದ D.C., S.P., S.D.O.P.ಗಳಿದ್ದ 5 ವಾಹನಗಳು ಅಲ್ಲಿಗೆ ಬಂದವು. ಅವರೆಲ್ಲ ಸೆಮಿನಾರ್ ಒಂದರಲ್ಲಿ ಭಾಗವಹಿಸಿ ಬರುತ್ತಿದ್ದರು.

ಗೌರವಾನ್ವಿತ ಹುದ್ದೆಯಲ್ಲಿರುವ ಆ ಅಧಿಕಾರಿಗಳೂ ಸಹ ಬಾಲಿಶವಾಗಿ, ಬೇಜವಾಬ್ದಾರಿಯಿಂದ ವರ್ತಿಸಿದ್ದಲ್ಲದೆ ಗಾಯಿತ್ರಿಯ ಮನೆಯವರ ಮೇಲೆ ನಡೆಯುತ್ತಿದ್ದ ಹಿಂಸೆಗೆ ಅವರೂ ಕೈಜೋಡಿಸಿದರು.

***ಅಂಚೆ ಕಛೇರಿ, ಬ್ಯಾಂಕಿನ ಕೆಲಸವೆಂದು ಹೊರ ಹೋಗಿದ್ದ ಗಾಯಿತ್ರಿ ಮತ್ತು ಸಂಜಯ್ ಹಿಂತಿರುಗಿ ಬಂದಾಗ ಕಂಡದ್ದು ಅಲ್ಲಿ ನಡೆಯುತ್ತಿದ್ದ ಹಿಂಸಾಚಾರವನ್ನು. ಆಕೆ ಏನನ್ನೂ ಹೇಳುವ ಮೊದಲೆ ಆಕೆಯನ್ನು ಅರೆಸ್ಟ್ ಮಾಡಿ, ಆಕೆಯೇ ಸಂಸ್ಥೆ ನಡೆಸುತ್ತ ತೊಂದರೆ ಹುಟ್ಟುಹಾಕುತ್ತಿರುವವಳು ಎಂದು D.C. ಕೂಗಿದ. ಅಲ್ಲದೆ ಬಲವಾಗಿ ಆಕೆಯ ಮುಖದ ಮೇಲೆ ಹೊಡೆದ. ಹೊಡತಕ್ಕೆ ಆಕೆ ತತ್ತರಿಸಿಬಿದ್ದಳು. ಬಿದ್ದ ಮೇಲೂ ಆಕೆಯನ್ನು ಜಾಡಿಸಿ ಒದೆಯಲಾಯಿತು.***

ಅಲ್ಲಿದ್ದ ಪೊಲೀಸಿನವನು ಸಂಜಯ್‌ನನ್ನು ಬಂದೂಕಿನಲ್ಲಿ ಹೊಡೆಯಲಾರಂಭಿಸಿದನು ಆತ ತಲೆಗೆ ಹೊಡೆತ ಬಿದ್ದುದ್ದರಿಂದ ಪ್ರಜ್ಞೆ ಕಳೆದುಕೊಂಡ. ನಂತರ ಗಾಯಿತ್ರಿ ಮತ್ತವಳ ಕುಟುಂಬದವರೆಲ್ಲರನ್ನು ಅರೆಸ್ಟ್ ಮಾಡಲಾಯಿತು. ಪ್ರಜ್ಞೆ ತಪ್ಪಿದ್ದರಿಂದ ಸಂಜಯ್‌ನನ್ನು ಆಸ್ಪತ್ರೆಗೆ ಸಾಗಿಸಲಾಯಿತು. ಅರೆಸ್ಟ್ ಮಾಡಿದವರನ್ನು ಬಡಿ ಕೋತ್ವಾಲಿ ಠಾಣೆಗೆ ಒಯ್ದು ಅಲ್ಲಿ ಮತ್ತೆ ಎಲ್ಲರನ್ನೂ ಥಳಿಸಲಾಯಿತು. D.M., S.P., SDOPಯವರು ಹೊಡೆತದಲ್ಲಿ ಪಾಲ್ಗೊಂಡರು. ಗಾಯತ್ರಿಯ ತಂದೆಗೆ ತೀವ್ರ ಎದೆನೋವು ಕಾಣಿಸಿಕೊಂಡು ಕೆಳಗೆ ಬಿದ್ದರು. ಅದನ್ನು ಕಂಡ D.M. ಗಾಯಿತ್ರಿ ತಂದೆ ಬುಡ್ಡ್‌ಶರನ್ ಶರ್ಮಾರನ್ನು ಬಿಟ್ಟುಬಿಡಲು ಹೇಳಿದರು. ನಂತರ 8 ಗಂಟೆಯ ವೇಳೆಗೆ ಎಲ್ಲರನ್ನು ದೆಹತ್ ಠಾಣೆಗೆ ಒಯ್ದು ಮತ್ತೆ ಕಿರುಕುಳ ನೀಡಿದರು. ಆ ದಿನ ಯಾರಿಗೂ ಆಹಾರ ನೀಡಲಿಲ್ಲ.

ಗಾಯತ್ರಿಯ ತಂದೆಯವರು ಹೇಳುವ ಪ್ರಕಾರ ಪೊಲೀಸರು 21ರ ರಾತ್ರಿ ನಾಲ್ಕು ಬಾರಿ ಭೇಟಿ ನೀಡಿದರು. ಪ್ರತಿಸಾರಿ ಬಂದಾಗಲು ಸಾಕ್ಷಾಧಾರಗಳಿಗೆಂದು ಒಂದಲ್ಲ ಒಂದು ವಸ್ತುವನ್ನು ತೆಗೆಯುತ್ತಿದ್ದರು. ಮಧ್ಯರಾತ್ರಿ 1 ಗಂಟೆಯ ಹೊತ್ತಿಗೆ ಪೊಲೀಸಿನವನೊಬ್ಬ ಬಂದಾಗ ಗಾಯತ್ರಿಯ ತಂದೆ ಈಗ ಏನು ಬೇಕಾಗಿದೆ ಎಂದು ಕೇಳಿದರು. ಬಂದಿದ್ದ ವ್ಯಕ್ತಿ ತನ್ನನ್ನು ಮೋಹನ್‌ಲಾಲ್ ದಿವಾನ್ ಎಂದು ಪರಿಚಯಿಸಿಕೊಂಡು, ಅರೆಸ್ಟ್ ಆಗಿರುವವರಿಗೆ ಉಡುವ ಬಟ್ಟೆಗಳು ಬೇಕೆಂದು ಹಾಗೂ ತನ್ನೊಂದಿಗೆ D.M. ಸಹ ಬಂದಿದ್ದಾರೆಂದು ಹೇಳಿದ. ಇದನ್ನು ಕೇಳಿ ಅವರು ಕೂಡಲೆ ಬಾಗಿಲು ತೆರೆದರು. ಆ ವ್ಯಕ್ತಿ ಮನೆಯೊಳಗೆ ಬಂದು ಮದುವೆಗೆಂದು ಇಟ್ಟಿದ್ದ 21,000/- ರೂ.ಗಳನ್ನು ಹಾಗೂ 16,000/- ರೂ. ಬೆಲೆ ಬಾಳುವ ಒಡವೆಗಳನ್ನು ತೆಗೆದುಕೊಂಡು ಇವುಗಳನ್ನು ದಾಖಲು ಮಾಡಲು ಒಯ್ಯುತ್ತಿರುವುದಾಗಿ ಹೇಳಿದ. ಆದರೆ ಆ ವಸ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಯಾವ ದಾಖಲೆ ಪತ್ರವನ್ನು ತೋರಿಸಲಿಲ್ಲ.

22 ರಂದು ಸಂಜೆ 5 ಗಂಟೆಗೆ ಗಾಯತ್ರಿ ಮತ್ತವರ ಮನೆಯವರನ್ನು ಕೋರ್ಟಿಗೆ ಒಯ್ಯಲಾಯಿತು. ಅಲ್ಲಿ ಅವರನ್ನು ನ್ಯಾಯಾಂಗ ಕಸ್ಟಡಿಗೆ ಒಪ್ಪಿಸಲಾಯಿತು. ಆ ಸಮಯದಲ್ಲಿ ಎಲ್ಲರ ವೈದ್ಯಕೀಯ ಪರೀಕ್ಷೆ ಮಾಡಲಾಯಿತು ಎಂದು D.C., S.P. ಮತ್ತು SDOPಯವರು ನೀಡಿರುವ ಹೇಳಿಕೆಯನ್ನು ಗಾಯಿತ್ರಿ ಮತ್ತವರ ಮನೆಯವರು ನಿರಾಕರಿಸಿದ್ದಾರೆ. ಆದರೆ ಕೆಲವು ಖಾಲಿ ಹಾಳೆಗಳ ಮೇಲೆ ಬಲವಂತವಾಗಿ ನಮ್ಮ ರುಜು ತೆಗೆದುಕೊಳ್ಳಲಾಯಿತು ಎಂದು ಗಾಯತ್ರಿ ಹೇಳಿದರು.

ಕೋರ್ಟಿನಿಂದ ಕುಟುಂಬದ ಪುರುಷರನ್ನು ಜೈಲಿಗೆ ಒಯ್ಯಲಾಯಿತು ಮತ್ತು ಹೆಂಗಸರನ್ನು ಠಾಣೆಗೆ ಒಯ್ದರು. ಕಾನೂನಿನ ಪ್ರಕಾರ ನ್ಯಾಯಾಂಗ ಕಸ್ಟಡಿಗೆ ಒಪ್ಪಿಸಿದ ಮೇಲೆ ಠಾಣೆಗೆ ಒಯ್ಯುವಂತಿಲ್ಲ. ಗಾಯಿತ್ರಿ ಮತ್ತವರ ತಾಯಿ, ತಂಗಿಯರನ್ನು ಠಾಣೆಗೆ ಒಯ್ದಿರುವುದು ದಾಖಲಾಗಿದೆ. ಶಿವಪುರಿಯಲ್ಲಿ ಮಹಿಳೆಯರನ್ನಿಡುವ ಜೈಲು ಇಲ್ಲ ಮತ್ತು ಗ್ವಾಲಿಯರ್ ಜೈಲನ್ನು ತಲುಪಲು 3 ಗಂಟೆಗಳಾಗುವುದೆಂದು ಪೊಲೀಸರಿಗೆ ಗೊತ್ತು. ಹಾಗಾದರೂ ಗಾಯತ್ರಿ ಮತ್ತವರ ಮನೆಯವರನ್ನು 21-12-99ರಂದು 3 ಗಂಟೆಗೆ ಅರೆಸ್ಟ್ ಮಾಡಿ ದಿನಾಂಕ 22-12-99ರಂದು 5 ಗಂಟೆಗೆ ಮ್ಯಾಜಿಸ್ಟ್ರೇಟರ್ ಮುಂದೆ ಹಾಜರು ಪಡಿಸಿದ್ದಾರೆ. ಕಾರಣ ಕೇಳಿದಾಗ SDOPಯವರು ಮ್ಯಾಜಿಸ್ಟ್ರೇಟರ್ ಮುಂದೆ ಹಾಜರು ಪಡಿಸಬೇಕಾದ ಅಧಿಕಾರಿಯು ಹಿಂದಿನ ದಿನ ರಾತ್ರಿ

ಡ್ಯೂಟಿಯಲ್ಲಿದ್ದರು. ಮರುದಿನ ಬೆಳಿಗ್ಗೆ ಲೇಟಾಗಿ ಬಂದರು. ಆದ್ದರಿಂದ ಹಾಜರು ಪಡಿಸಲು ತಡವಾಯ್ತು.

*ತಡವಾದ ಕಾರಣ ಗ್ವಾಲಿಯರ್ ಜೈಲಿಗೆ ಒಯ್ಯಲಾಗಲಿಲ್ಲ. ಏಕೆಂದರೆ 6 ಗಂಟೆಯ ನಂತರ ಗ್ವಾಲಿಯರ್ ಜೈಲಿನಲ್ಲಿ ಮಹಿಳೆಯರನ್ನು ಸೇರಿಸಿಕೊಳ್ಳುವುದಿಲ್ಲ. ಬೇರೇನೂ ವ್ಯವಸ್ಥೆ ಇಲ್ಲದ ಕಾರಣ. ಮಹಿಳಾ ಆಪಾದಿತರನ್ನು ಠಾಣೆಗೆ ಒಯ್ದೆವು ಎಂದು ಹೇಳಿದ್ದಾರೆ. ಆದರೆ ಮಹಿಳಾ ಆಪಾದಿತರನ್ನು 5 ಗಂಟೆಯ ನಂತರವೂ ಸೇರಿಸಿಕೊಂಡಿದ್ದೇವೆ ಎಂದು ಜೈಲಿನ ಸಿಬ್ಬಂದಿಗಳು ಸಮಿತಿಗೆ ತಿಳಿಸಿದ್ದಾರೆ. ಅಲ್ಲದೆ ರಾತ್ರಿ 10 ಗಂಟೆಗೂ ಮಹಿಳಾ ಆಪಾದಿತರನ್ನು ಜೈಲಿಗೆ ಸೇರಿಸಿಕೊಂಡಿರುವುದರ ದಾಖಲೆಗಳಿವೆ.*

ಠಾಣೆಯಲ್ಲಿ ತನ್ನೊಬ್ಬಳನ್ನ ಬೇರೆ ಕೋಣೆಗೆ ಒಯ್ದು ಅಲ್ಲಿದ್ದ D.M. ಮತ್ತು SDOPಯವರು ತಾವು ಹೇಳಿದಂತೆ ನಡೆದುಕೊಳ್ಳದಿದ್ದರೆ ಅವಳ ತಂಗಿಯರಿಗೂ ಇದೇ ಶಿಕ್ಷೆ ಕಾದಿವೆ ಎಂದು ಬೆದರಿಸಿ ಅತ್ಯಾಚಾರವೆಸಗಿದರು, ಹಿಂಸಿಸಿ ಕಿರುಕುಳ ನೀಡಿದರೆಂದು ಗಾಯತ್ರಿ ಹೇಳಿದ್ದಾರೆ. ಗಾಯತ್ರಿಯ ತಂಗಿಯರೂ ಸಹ ಲೈಂಗಿಕ ಕಿರುಕುಳ ಅನುಭವಿಸಿ ತೀವ್ರ ಮಾನಸಿಕ ಆಘಾತಕ್ಕೆ ಒಳಗಾಗಿದ್ದಾರೆ. 21ರ ರಾತ್ರಿ ನಮಗೆ ಬೇರೆ ಬಟ್ಟೆಗಳನ್ನು ನೀಡಿದರು, ಹರಿದ ನೆತ್ತರ ಕಲೆ ಇದ್ದ ನಮ್ಮ ಬಟ್ಟೆಗಳನ್ನು ಪೊಲೀಸರು ಇಟ್ಟುಕೊಂಡರು. 23ರಂದು ಗ್ವಾಲಿಯರ್ ಜೈಲಿಗೆ ಒಯ್ದರು ಮತ್ತು ಲಾಕಪ್ ಬಿಡುವಾಗ ಯಾವ ವೈದ್ಯಕೀಯ ಪರೀಕ್ಷೆ ನಡೆಸಿಲ್ಲವೆಂದು, ಖಾಲಿ ಹಾಳೆಗಳ ಮೇಲೆ ಸಹಿ ತೆಗೆದುಕೊಳ್ಳಲಾಯಿತೆಂದು ಗಾಯತ್ರಿ ಹೇಳಿದ್ದಾರೆ.

ಸತ್ಯಶೋಧಕ ಸಮಿತಿಯವರು ಸೆಪ್ಟಂಬರ್ 30 ರಿಂದ ಅಕ್ಟೋಬರ್ 2ರ ವರೆಗೆ ಶಿವಪುರಿಯಲ್ಲಿದ್ದಾಗ ಗಾಯತ್ರಿಯವರು ತಂಗಿಯರು ಭೇಟಿಯಾಗಲು ಸಿಗಲಿಲ್ಲ. ಸಮಿತಿಯ ಸದಸ್ಯರೊಬ್ಬರು ಅಕ್ಟೋಬರ್ 13ರಂದು ಮತ್ತೆ ಭೇಟಿಯಾಗಲು ಹೋದರು. ಪ್ರಾರಂಭದಲ್ಲಿ ಮಾತನಾಡಲು ಉಷಾ ನಿರಾಸಕ್ತಿ ತೋರಿಸಿದರು. ನಂತರ ತಮಗಾದ ನೋವಿನ ಅನುಭವವನ್ನು ಹೇಳಿಕೊಂಡರು. 21ರ ಮಧ್ಯಾಹ್ನ. ಅವಳು ಹಾಗೂ ಅವಳ ತಂಗಿ ಬಟ್ಟೆ ಒಗೆಯುತ್ತಿದ್ದಾಗ ಡಾಬಾ ಕಡೆಯಿಂದ ಗಲಾಟೆ ಶಬ್ದ ಕೇಳಿಸಿತು. ಅವರಿಬ್ಬರು ಅಲ್ಲಿಗೆ ಓಡಿದರು. ಅಕ್ಕ ಗಾಯಿತ್ರಿ ಪೋಸ್ಟಾಫಿಸು ಬ್ಯಾಂಕಿನ ಕೆಲಸಕ್ಕೆಂದು ಹೋಗಿದ್ದರು. ಘಟನೆ ನಡೆದ ಸ್ವಲ್ಪ ಕಾಲದ ನಂತರ ಆಕೆ ಬಂದದ್ದು. ಸರಿಯಾಗಿ ವಿವರಣೆ ನೀಡುವ ಮೊದಲೇ ಕಲೆಕ್ಟರ್ ಅವರು ಎಲ್ಲರನ್ನೂ ಅರೆಸ್ಟ್ ಮಾಡಲು ಆಜ್ಞೆ ಮಾಡಿದರು. 85 ವಯಸ್ಸಿನ ತಂದೆ, 65 ವಯಸ್ಸಿನ ತಾಯಿಯನ್ನು ಬಿಡಲಿಲ್ಲ. ಠಾಣೆಗೆ ಒಯ್ದು ಎಲ್ಲರನ್ನೂ ಥಳಿಸಿದರು. ಥಳಿಸುವ ಸಂದರ್ಭದಲ್ಲಿ ಗಾಯಿತ್ರಿ ಮತ್ತವಳ ಸಂಸ್ಥೆ ರಿಹಾಯಿಯನ್ನು ಕುರಿತು ಬಯ್ಯುತ್ತಿದ್ದರು. ಆಗ ಗಾಯತ್ರಿ, ಅವರಿಗೆ 'ನಿಮಗೆ ನನ್ನ, ಹಾಗೂ ನನ್ನ ಸಂಸ್ಥೆಯಿಂದ ತೊಂದರೆಯಾಗಿದ್ದರೆ, ನನ್ನನ್ನು ಕಸ್ಟಡಿಯಲ್ಲಿಟ್ಟುಕೊಳ್ಳಿ, ಉಳಿದ ಸದಸ್ಯರನ್ನು ಬಿಟ್ಟುಬಿಡಿ' ಎಂದು ಕೇಳಿಕೊಂಡರು. ಅದರಲ್ಲೂ 10ನೇ ತರಗತಿಯಲ್ಲಿದ್ದ ಸತ್ಯೇಂದ್ರನಿಗೆ ಪರೀಕ್ಷೆ ಇತ್ತು. ಹೀಗೆ ಕೇಳಿದ ಮೇಲೆ ಮತ್ತೊಬ್ಬ ತಮ್ಮ ಲೋಕೇಂದ್ರನನ್ನು ಕರೆಸಿ ಎಲ್ಲರೆದುರಿನಲ್ಲಿ ಅವನನ್ನು ಥಳಿಸಿದರು. ದೆಹತ್ ಠಾಣೆಗೆ ಒಯ್ಯುವ ಮೊದಲು ಎಲ್ಲರನ್ನು ಮನ ಬಂದಂತೆ ಥಳಿಸಿದ್ದರು. ದೆಹತ್ ಠಾಣೆಗೆ ಒಯ್ದ ಮೇಲೂ ಒಬ್ಬೊಬ್ಬರನ್ನೇ ಕೋಣೆಗೆ ಒಯ್ದು ಮತ್ತೆ ಹೊಡೆದರು. ಕಾಲುಗಳನ್ನು ಕಟ್ಟಿಹಾಕಿ ಒಬ್ಬ ಪೊಲೀಸ್ ಕಾಲುಗಳನ್ನು ಎತ್ತಿಹಿಡಿದುಕೊಂಡರೆ, ಮತ್ತೊಬ್ಬ ಪೊಲೀಸು ಪಾದಗಳ ಮೇಲೆ ಹೊಡೆಯುತ್ತಿದ್ದ. ಕಾಲು, ಬೆನ್ನುಗಳ ಮೇಲೂ ಹೊಡೆದರು. ಮೊಣಕಾಲಿನ ಮೇಲಾದ ಗಾಯದ ಗುರುತುಗಳನ್ನು ಆಕೆ ತೋರಿಸಿದರು. ಈಗಲ್ಲೂ ನಡೆಯುವಾಗ ನೋವಾಗುತ್ತದೆ ಎಂದರು. ಡಿ. 22 ರಂದು ಮ್ಯಾಜಿಸ್ಟೇಟರ್ ಮುಂದೆ ಹಾಜರು ಪಡಿಸಿದ ನಂತರವೂ ಜೈಲಿಗೆ ಕಳಿಸದೆ ಲಾಕಪ್ಪಿಗೆ ಕರೆದುಕೊಂಡು ಹೋಗಿ ಮತ್ತೆ ಕಿರುಕುಳ ನೀಡಿದರು. ಆ ರಾತ್ರಿ ವ್ಯಕ್ತಿಯೊಬ್ಬ ಬಂದು ದೊಡ್ಡ ಸಾಹೇಬರು ಕರೆಯುತ್ತಿದ್ದಾರೆ ಎಂದು ಗಾಯತ್ರಿಯನ್ನು ಕರೆದುಕೊಂಡು ಹೋದರು. ಬಹಳ ಹೊತ್ತಿನ ನಂತರ ಕರೆದುಕೊಂಡು ಬಂದರು. ಬಂದಾಗ ಆಕೆಯ ಮನಸ್ಥಿತಿ ಸರಿ ಇರಲಿಲ್ಲ, ಮಾತನಾಡಿಸಿದರೂ ಏನೋ ಮಾತಾಡಲು ಇಷ್ಟಪಡದೆ ಸುಮ್ಮನಿದ್ದಳು. ಏನೋ ಘೋರವಾದುದು ಆಕೆಯೊಂದಿಗೆ ನಡೆದಿರಬೇಕೆಂದುಕೊಂಡೆ ಎಂದು ಉಷಾ ಹೇಳಿದರು.

ಡಿ. 21, 1999ರಂದು ಅರೆಸ್ಟ್ ಆದ ಗಾಯತ್ರಿಗೆ ಬೇಲ್ ದೊರೆತ್ತಿದ್ದು ಏಪ್ರಿಲ್ 2000ದಂದು. ಕೋರ್ಟಿಗೆ ಕರೆದುಕೊಂಡು ಹೋಗುವಾಗ SDOPಯವರು ಏನಾದರು ಬಾಯಿಬಿಟ್ಟರೆ ಅವಳ ಮನೆಯವರಿಗೆ ಒಳ್ಳೆಯದಲ್ಲವೆಂದು, ಠಾಣೆಯಲ್ಲಿ ಬಿದ್ದ ಹೊಡೆತ, ಆಕೆಯ ಡಾಬಾ ಮತ್ತು ಕಛೇರಿಯನ್ನು ನೆಲಸಮ ಮಾಡಿರುವುದನ್ನು ನೆನಪಿಟ್ಟುಕೊಳ್ಳ ಬೇಕೆಂದು ಬೆದರಿಸಿದ. ಜೈಲಿನಲ್ಲಿ ಭೇಟಿಯಾಗಲು ಬಂದ ಕೆಲವರಿಗೆ ಮತ್ತು ರಾಜ್ಯ ಮಾನವ ಹಕ್ಕು ಸಮಿತಿಯ ಸದಸ್ಯ ಆರ್.ಡಿ. ಶುಕ್ಲಾ ಅವರಿಗೆ ಪೊಲೀಸರು ನೀಡಿದ ಹಿಂಸೆ, ಅತ್ಯಾಚಾರವನ್ನು ಹೇಳ ಬೇಕೆಂದಿದ್ದರೂ ಅಲ್ಲಿ ಪೊಲೀಸರಿದ್ದ ಕಾರಣ ಹೇಳಲು ಆಕೆ ಹಿಂಜರಿದರು. ಶುಕ್ಲಾ ಅವರ ವರ್ತನೆಯಂತೂ ಬಾಲಿಶವಾಗಿದೆ. ಕಿರುಕುಳ ನೀಡಿದವರೆದುರು ನಡೆದ ವಿಷಯ ವೇನೆಂದು ಕೇಳಿದ್ದಲ್ಲದೆ ಕೆಡವಿ ಹಾಕಿರುವುದು ನಿಮ್ಮ ಮನೆಯಲ್ಲವೇ? ಎಂದು ಕೇಳಿದ್ದಾರೆ. ಅವರ ಮಾತಿಗೆ ಅಲ್ಲಿದ್ದವರೆಲ್ಲ ನಕ್ಕಾಗ ಗಾಯತ್ರಿ ಮತ್ತಷ್ಟು ಕಸಿವಿಸಿ ಗೊಂಡರೂ ಸಹ ಅತ್ಯಾಚಾರವನ್ನು ಹೊರತುಪಡಿಸಿ ತಮ್ಮ

ಮೇಲೆ ನಡೆಸಲಾದ ಹಿಂಸೆಯನ್ನು ಅವರಿಗೆ ಹೇಳಿದರು. ಹೇಳಿದ್ದರಿಂದ ಪ್ರಯೋಜನವೇನೂ ಆಗಲಿಲ್ಲ.

ಜಾಮೀನಿಗಾಗಿ ಗಾಯತ್ರಿಯವರನ್ನು ಕೋರ್ಟಿನಲ್ಲಿ ಹಾಜರು ಪಡಿಸಲು 70 ದಿನಗಳೇಕಾಯಿತು ಎಂದು ಸಮಿತಿಯವರು ಪ್ರಶ್ನಿಸಿದಾಗ SDOP ಯವರು ವಿಚಾರಣೆಗಾಗಿ ಎಂದು ಹೇಳಿದರು. ಆದರೆ ವಿಚಾರಣೆಗೆ ಒಳಪಡಿಸ ಬೇಕಾದವರೆಲ್ಲ ಕಸ್ಟಡಿಯಲ್ಲಿ ಪೊಲೀಸರ ಸುಪರ್ದಿನಲ್ಲಿ ಇದ್ದಾಗಲೂ ಸಹ ವಿಚಾರಣೆ ತಡವಾದದ್ದು ಹೇಗೆ? ಟ್ರಕ್ ಡ್ರೈವರ್ ಸಹ ಬಂಧನದಲ್ಲಿದ್ದ. ನಡುವೆ ಮೂರು ಬಾರಿ ಹಿಯರಿಂಗ್ ಇದ್ದಾಗಲೂ ಗಾಯತ್ರಿಯವರನ್ನು ಕೋರ್ಟಿಗೆ ಹಾಜರು ಪಡಿಸಿರಲಿಲ್ಲ. ವಿಳಂಬಕ್ಕೆ SDOP ನೀಡಿದ ವಿವರಣೆ ಅದು ಜೈಲಿನವರ ಜವಾಬ್ದಾರಿ ನಮ್ಮದಲ್ಲ ಎಂದು. ಜೈಲಿನವರು ಹೇಳುವುದು ಅದು ನಮ್ಮ ಜವಾಬ್ದಾರಿಯಲ್ಲ ಪೊಲೀಸರ ಜವಾಬ್ದಾರಿ ಎನ್ನುತ್ತಾರೆ. ಇದು ಯಾರಲ್ಲಾದರೂ ಸಂಶಯ ಹುಟ್ಟಿಸುತ್ತದೆ.

ಗಾಯತ್ರಿಯವರನ್ನು ಜೈಲಿಗೆ ಕಳಿಸಿದ ನಂತರ ಡಿ 28ರಂದು ಸ್ಥಳೀಯ ಮುನಿಸಿಪಲ್ ಕಾರ್ಪೊರೇಷನ್‌ನವರು ಗಾಯತ್ರಿ ಮನೆಯ ಮುಂದಿದ್ದ ಎರಡು ಕಾಂಕ್ರೀಟ್ ಕಟ್ಟಡಗಳಾದ ಡಾಬಾ ಮತ್ತು ರಿಹಾಯಿ ಸಂಸ್ಥೆಯ ಕಛೇರಿಯನ್ನು ಉರುಳಿಸಿ ನೆಲಸಮ ಮಾಡಿದರು. ಕಟ್ಟಡ ಉರುಳಿಸುವ ಸಮಯದಲ್ಲಿ ಗಾಯತ್ರಿಯ ತಂದೆ ಮತ್ತವರ ತಮ್ಮಂದಿರಿದ್ದರು. ಸಮಿತಿಯವರು ಭೇಟಿ ನೀಡಿದಾಗ ಕಂಡದ್ದು ಕಟ್ಟಡ ಉರುಳಿ ಬಿದ್ದ ರಾಶಿ. ಅಲ್ಲಿದ್ದ ಸ್ವಲ್ಪ ಕಾಲದಲ್ಲಿ ಆದ ನಷ್ಟವೆಷ್ಟೆಂದು ತಿಳಿಯಲು ಸಾಧ್ಯ ವಾಗಲಿಲ್ಲ. ಉರುಳಿಸಿದ 2ನೇ ಕಟ್ಟಡ ನಿಗದಿ ಪಡಿಸಿರುವ 60 ಅಡಿಗಿಂತ ಆಚೆ ಏನೂ ಇಲ್ಲ. ಅಲ್ಲದೆ ಕೆಡವಿರುವ ಡಾಬಾ ಪಕ್ಕದಲ್ಲೆ ಮತ್ತೊಂದು ಹೊಸ ಕಟ್ಟಡ ನಿರ್ಮಾಣವಾಗುತ್ತಿದೆ. ಡಾಬಾದ ಕಟ್ಟಡ ಆಕ್ರಮವಾದರೆ ಈ ಕಟ್ಟಡವೂ ಆಕ್ರಮ ವಲ್ಲವೆ? ಅಲ್ಲಿ ಮತ್ಯಾವ ಕಟ್ಟಡವನ್ನು ನೆಲಸಮ ಮಾಡಿಲ್ಲ. ಆ ಸಮಯದಲ್ಲಿ ಎಲೆಕ್ಷನ್ ಸಂದರ್ಭವಾಗಿದ್ದು ಒಂದು ಕಟ್ಟಡವನ್ನು ಹುಡುಕಿಕೊಂಡು ಬಂದು ನೆಲಸಮ ಮಾಡುವುದು ಸಾಮಾನ್ಯವಲ್ಲ. ಕಟ್ಟಡ ಕೆಡುವುವ ಸಮಯದಲ್ಲಿ ಪಾಠಕ್ ಭಗವಾನಿ ಮತ್ತು ಮೀನಾ ಅವರು ಇದ್ದರೆಂದು ಗಾಯತ್ರಿ ಕುಟುಂಬದವರು ಸಮಿತಿಗೆ ತಿಳಿಸಿದರು. ತನಗೆ ಎಲೆಕ್ಷನ್ ಡ್ಯೂಟಿ ಇದ್ದುದರಿಂದ ತಾನು ಅಲ್ಲಿರಲಿಲ್ಲವೆಂದು ಪಾಠಕ್ ಹೇಳಿದ್ದಾರೆ.

ಗಾಯತ್ರಿಯವರ ತಂದೆ ತಮ್ಮ ಕುಟುಂಬದವರ ಮೇಲಾದ ದೌರ್ಜನ್ಯವನ್ನು ಕುರಿತು ಕಲೆಕ್ಟರ್ ಬಳಿ ದೂರು ನೀಡಲು ಪ್ರಯತ್ನಿಸಿದರು. ಸಾಧ್ಯವಾಗದ ಕಾರಣ ಉನ್ನತ ಅಧಿಕಾರಿಗಳಿಗೆ ಲಿಖಿತ ದೂರನ್ನು ಡಿ 23, 24ರಂದು ನೀಡಿದರು. ಈ ರೀತಿ ದೂರು ನೀಡಿದ್ದಕ್ಕೆ ಕಟ್ಟಡ ನೆಲಸಮ ಮಾಡಲಾಯಿತೆಂದು ಗಾಯತ್ರಿ ಮನೆಯವರ ಅಭಿಪ್ರಾಯ.

ಸಮಿತಿಯವರು ಅಲ್ಲಿಗೆ ಭೇಟಿ ನೀಡಿದ ಸಂದರ್ಭದಲ್ಲಿ ದಿನ ಪತ್ರಿಕೆಯೊಂದರಲ್ಲಿ (18-8-2000ದ ದಿನ ಪತ್ರಿಕೆ) ಜಾಹಿರಾತನ್ನು ಗಮನಿಸಿದರು. ನಗರ ಮತ್ತು ಗ್ರಾಮ ನಿವೇಶನ ಪ್ರಾಧಿಕಾರದ ಸೆಕ್ಷನ್ 230 ಪುರಿ ಅಭಿವೃದ್ಧಿ ಯೋಜನೆ 2001 ಅಡಿ ಶಿವಪುರಿ ಆಡಳಿತವು ಕೆಲವು ಯೋಜನೆಗಳನ್ನು ತಯಾರಿಸಿದ್ದು ಹಸಿರು ಪಟ್ಟಿ ಯೋಜನೆ ಅದರಲ್ಲಿ ಬರುತ್ತದೆ. ಇಲಾಖೆ ನೀಡಿರುವ ನೋಟಿಸ್ ಪ್ರಕಾರ 20 ಮೀ ಭೂಮಿಯನ್ನು ಹಸಿರು ಪಟ್ಟಿ ಎಂದು ಬಿಡಬೇಕು. ಈ ನೋಟಿಸ್‌ನಲ್ಲಿ ಶಿವಪುರಿಯ ಮೂರು ನಂಬರ್‌ಗಳನ್ನು ನಮೂದಿಸಲಾಗಿತ್ತು. ಆಶ್ಚರ್ಯವೆಂದರೆ ಮೂರು ನಂಬರ್‌ಗಳಲ್ಲಿ ಎರಡು ಗಾಯತ್ರಿಯವರ ತಂದೆಗೆ ಸೇರಿದ್ದು. ಈ ಭೂಮಿ ಕುಟುಂಬದ ಮುಖ್ಯ ಆದಾಯಕ್ಕೆ ಆಧಾರವಾಗಿದೆ. 1950ರಿಂದಲೂ ಅದು ಕುಟುಂಬದ ಹೆಸರಿನಲ್ಲಿದೆ. ಈಗ ಆ ಭೂಮಿಯನ್ನು ಮಾರಲು ಒತ್ತಾಯಿಸಲಾಗುತ್ತಿದೆ. ಸದ್ಯಕ್ಕೆ ಈ ನೋಟಿಸ್ ವಿರುದ್ಧ ಗಾಯತ್ರಿಯವರ ತಂದೆಗೆ ತಡೆಯಾಜ್ಞೆ ಸಿಕ್ಕಿದೆ. ಈ ಕುರಿತು ಮುನಿಸಿಪಲ್ ಕಾರ್ಪೊರೇಷನ್‌ಗೆ ರಜೆ ಇದ್ದ ಕಾರಣ, ಸಮಿತಿಗೆ ಹೆಚ್ಚಿನ ಮಾಹಿತಿ ಪಡೆಯಲು ಸಾಧ್ಯವಾಗಲಿಲ್ಲ.

ಗಾಯತ್ರಿಯವರ ತಮ್ಮ ಹಾಗೂ ತಮ್ಮ ತಂಗಿ ಉಷಾ ಹಾಗೂ ಇನ್ನಿತರ ಕುಟುಂಬದ ಸದಸ್ಯರುಗಳ ಮೇಲೆ ಟ್ರಕ್ ಡ್ರೈವರ್‌ನನ್ನು ಹೊಡೆದರೆಂಬ ಕಾರಣಕ್ಕೆ, ನಡುವೆ ಬಂದ ಪೊಲೀಸಿನವರನ್ನು ಹೊಡೆದರೆಂದು, ಎಷ್ಟೇ ಸಮಾಧಾನ ಪಡಿಸಲು ಯತ್ನಿಸಿದರೂ ಆ ಕುಟುಂಬದವರು ಸಮಾಧಾನ ಗೊಳ್ಳದೆ ವಿಪರೀತ ಗಲಾಟೆ ಮಾಡಿದ ಕಾರಣಕ್ಕೆ ಸೆಕ್ಷನ್ 307, 395 ಮತ್ತು 342ರಡಿ ಅರೆಸ್ಟ್ ಮಾಡಲೇಬೇಕಾಯ್ತು ಎಂದು ಶೈಲೇಶ್ ಪಾಠಕ್ ಮತ್ತು ಇತರರು ಹೇಳಿದ್ದಾರೆ. ಈ ಕುಟುಂಬದವರಿಗೆ ಕ್ರಿಮಿನಲ್ ಹಿನ್ನೆಲೆ ಇದೆ, ಮತ್ತವರು ಸ್ವಭಾವತಃ ತೊಂದರೆ ಉಂಟುಮಾಡುವವರು, ಹೆಣ್ಣು ಮಕ್ಕಳು ಉತ್ತಮ ನಡತೆ ಇಲ್ಲದವರು, ಅವರ ಡಾಬಾ ದುಷ್ಟ ಕೆಲಸಗಳು ನಡೆಯುವ ಸುಪ್ರಸಿದ್ಧ ಜಾಗವೆಂದು, ಅದರ ಬಗ್ಗೆ ಅನೇಕ ದೂರುಗಳು ಬಂದಿವೆ ಎಂದು ಆಪಾದಿಸಿದ್ದಾರೆ.

ಗಾಯತ್ರಿಯವರು ವಿಜಯ್ ಭಗವಾನಿ (SDOP) ಶೈಲೇಶ್ ಪಾಠಕ್ (D.C) ಮೇಲೆ ಅತ್ಯಾಚಾರ ಮತ್ತು ಕಿರುಕುಳ ನೀಡಿದರೆಂದು, R.B.ಶರ್ಮ, ರಾಜೇಶ್ ತಿವಾರಿ, ಬಹದ್ದೂರ್‌ಸಿಂಗ್, ವಿನೋದ್‌ಶರ್ಮ, ಅರುಣ್ ಶರ್ಮ, ಗೌರಿಶಂಕರ್ ಶರ್ಮ, ಸುನೀಲ್ ಶ್ರೀವಾಸ್ತವ್, ಆರ್.ಎಸ್. ಮೀನಾ(S.P. ಶಿವಪುರಿ) ಅವರಗಳು ದೌರ್ಜನ್ಯ, ನಡೆಸಿದರು, ಕಿರುಕುಳ ನೀಡಿದರೆಂದು ದೂರು ದಾಖಲಿಸಿದ್ದಾರೆ. ಕೇಸು ಮುಖ್ಯ ಮ್ಯಾಜಿಸ್ಟ್ರೇಟ್ ಶ್ರೀ ಗಾರ್ಗ್ ಅವರ ಮುಂದೆ ಬಂದಾಗ ಅವರು

ಗಾಯತ್ರಿಯವರ ಹೇಳಿಕೆಯನ್ನು ದಾಖಲಿಸಿಕೊಂಡಿದ್ದರು. ಆ ಸಮಯದಲ್ಲಿ ಪಾಠಕ್, ಮ್ಯಾಜಿಸ್ಟ್ರೇಟರ ವಿರುದ್ಧ ಭ್ರಷ್ಟಾಚಾರ, ಸುಲಿಗೆಯಂತಹ ಗಂಭೀರ ಆರೋಪ ಹೊರಿಸಿ ಸೆಶನ್ಸ್ ಕೋರ್ಟಿಗೆ ಅರ್ಜಿ ಹಾಕಿ ಕೇಸನ್ನು ವರ್ಗಾಯಿಸಬೇಕೆಂದು ಕೇಳಿಕೊಂಡ ಕಾರಣ, ಕೇಸನ್ನು ವರ್ಗಾಯಿಸಲಾಯಿತು. ಈಗ ಕೇಸು ಕಪಿಲ್ ಮೆಹ್ತಾ ಅವರ ಮುಂದಿದೆ. ಅವರು ಗಾಯಿತ್ರಿ ಕಡೆಯವರ ಸಾಕ್ಷಿಗಳ ಹೇಳಿಕೆಗಳನ್ನು ಪಡೆದುಕೊಂಡು ಸೆಕ್ಷನ್ 148, 149, 294, 326, 376 ಮತ್ತು 506ರ ಅಡಿ ವಿಚಾರಣೆ ಕೈಗೆತ್ತಿಕೊಂಡಿದ್ದಾರೆ. ಈ ನ್ಯಾಯಾಧೀಶರ ಮೇಲೂ ಆಪಾದಿತ ಪಾಠಕ್ ಕೇಸು ನಡೆಸುತ್ತಿರುವ ವಿಧಾನ ಸರಿ ಇಲ್ಲವೆಂದು ಆಪಾದಿಸಿ ತಡೆಯಾಜ್ಞೆ ನೀಡಬೇಕೆಂದು ಕೇಳಿಕೊಂಡಿದ್ದಾನೆ.

ಸಮಿತಿಯು ಗಾಯತ್ರಿಯವರ ವಕೀಲ ಸುನಿಲ್ ಕುಮಾರ್‌ಜೈನ್ ಅವರನ್ನು ಭೇಟಿ ಮಾಡಿದರು. ಸುನೀಲ್ ಅವರ ತಂದೆ ಡಿ.ಕೆ. ಜೈನ್ ಅವರು ಮಧ್ಯ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದಲ್ಲಿ ಅಡಿಷನಲ್ ಸೂಪರಿಂಟೆಂಡೆಂಟ್ ಇಂಜಿನಿಯರ್ ಆಗಿದ್ದಾರೆ. ಜೂನ್ ತಿಂಗಳ ಕೊನೆಯಲ್ಲಿ ಶೈಲೇಶ್ ಪಾಠಕ್ ಅವರ ಸ್ನೇಹಿತ ಪರಿಹಾರ್ ಎಂಬುವವರು ಜೈನ್ ಅವರಲ್ಲಿಗೆ ಬಂದು ಶೈಲೇಶ್ ಅವರು ನಿಮ್ಮನ್ನು ಕಾಣಲು ಹೇಳಿಕಳಿಸಿದ್ದಾರೆಂದು ಹೇಳಿದರು.

*ಜೈನ್ ಅವರು 6 ಸಾರಿ ಶೈಲೇಶ್ ಅವರನ್ನು ಕಾಣಲು ಪ್ರಯತ್ನಿಸಿದರು. ಕೊನೆಗೆ ಸಿಕ್ಕಾಗ ಪಾಠಕ್ ಜೈನ್ ಅವರಿಗೆ ನಿಮ್ಮ ಮಗನಿಗೆ ಕೇಸನ್ನು ಬಿಡಬೇಕೆಂದು ಹೇಳಿ ಇಲ್ಲವಾದರೆ ನಿಮ್ಮ ಮೇಲೆ ಭ್ರಷ್ಟಾಚಾರದ ಆರೋಪ ಹೊರಿಸಿ ದೂರು ನೀಡುವೆ ಎಂದು ಬೆದರಿಸಿದ್ದಾರೆ. ಇದಲ್ಲದೆ ಸುನೀಲ್ ಅವರ ಬಳಿಗೆ ಪಾಠಕ್ ಅವರ ಸಂದೇಶವನ್ನು ತೆಗೆದುಕೊಂಡು ಪಿ.ಕೆ. ಶರ್ಮಾ(A.D.P.O) ಅವರು ಬಂದು ಗಾಯತ್ರಿಯವರ ಕೇಸನ್ನು ಕೈ ಬಿಡದಿದ್ದರೆ ಗಂಭೀರವಾದ ಪರಿಣಾಮ ಎದುರಿಸ ಬೇಕಾಗುವುದೆಂದು ಬೆದರಿಸಿದ್ದಾರೆ.*

ಸುನೀಲ್ ಅವರು ಬಾರ್ ಕೌನ್ಸಿಲ್‌ಗೆ ದೂರು ನೀಡಿದರು. ಕೌನ್ಸಿಲ್‌ನವರು 3-7-2000ದಂದು ನಿರ್ಣಾಯಕವನ್ನು ಹೊರಡಿಸಿ ಪಾಠಕ್‌ರವರ ವರ್ತನೆಯನ್ನು ಖಂಡಿಸಿ ಪ್ರತಿಭಟನೆ ನಡೆಸಿದ್ದಾರೆ.

ಸಮಿತಿಯು ರಾಜ್ಯ ಮಾನವ ಹಕ್ಕುಗಳ ಆಯೋಗದ ಮುಖ್ಯಸ್ಥ ಜಸ್ಟೀಸ್ ಗುಲಾಬ್‌ಚಂದ್ ಗುಪ್ತಾರವರನ್ನು ಭೇಟಿ ಮಾಡಿತು. ಅವರು, ಗಾಯತ್ರಿಯವರು ಆಯೋಗದ ಹಾದಿ ತಪ್ಪಿಸಿದ್ದಾರೆ, ಅವರು ಮಾಡಿರುವ ಆರೋಪಗಳು ಸುಳ್ಳು, ಆಯೋಗದ ಸದಸ್ಯ ಆರ್.ಡಿ. ಶುಕ್ಲಾರವರು ಗಾಯತ್ರಿ ಯವರನ್ನು ಭೇಟಿ ಮಾಡಲು ಜೈಲಿಗೆ ಹೋದಾಗ ಅವರು ಠಾಣೆಯಲ್ಲಿ ನಡೆದ ಅತ್ಯಾಚಾರ ಕುರಿತು ಏನೂ ಹೇಳಿಲ್ಲ ಮತ್ತು ಆಯೋಗ ನೇಮಿಸಿ, ವಿಚಾರಣೆಗೆಂದು ಕಳಿಸಿದ್ದ ರಾಥೋಡ್ ಅವರಿಗೆ ಗಾಯತ್ರಿಯವರು ಆಪಾದಿತರ ವಿರುದ್ಧ ಹೇಳಿಕೆ ನೀಡಲು ನಿರಾಕರಿಸಿದರು ಎಂದು ಹೇಳಿದ್ದಾರೆ.

*ಆಪಾದಿತರ ಎದುರಿನಲ್ಲೆ ವಿಚಾರಣೆ ನಡೆಸಿದರೆ ಹೇಳಿಕೆ ನೀಡುವುದು ಸಾಧ್ಯವೇ? ಎಂದು ಸಮಿತಿಯು ಪ್ರಶ್ನಿಸಿದಾಗ ಮಾನವ ಹಕ್ಕು ಆಯೋಗದ ವಿಚಾರಣೆಯನ್ನು ಅವರು ಎದುರಿನಲ್ಲೆ ಮಾಡಬೇಕೆಂದರು. ಅಲ್ಲದೆ ಕಿರುಕುಳ ನೀಡಿರುವುದಕ್ಕೆ ಪುರಾವೆ ಇಲ್ಲವೆಂದರು. ಸಮಿತಿಯವರು ವರದಿಯ ಪ್ರತಿಯನ್ನು ಕೇಳಿದಾಗ ಕೊಡಲು ಅವರು ನಿರಾಕರಿಸಿದರು. ಮತ್ತೆ ಕೇಳಿದಾಗ ಅವರು ಸದಸ್ಯರನ್ನು ಅವಮಾನಿಸಿ ಅಲ್ಲಿಂದ ಹೋಗಬೇಕೆಂದು ಹೇಳಿದರು.*

ಗಾಯತ್ರಿಯವರನ್ನು ಬಿಟ್ಟು ಕುಟುಂಬದ ಇತರ ಸದಸ್ಯರನ್ನು ವಿಚಾರಣೆಗಾಗಿ ಭೇಟಿಯಾಗದಿರುವುದು ಆಶ್ಚರ್ಯ.

ಗಾಯತ್ರಿಯವರ ಕೇಸಿನಲ್ಲಿ ಮತ್ತಷ್ಟು ಗೊಂದಲ ಹುಟ್ಟಿಸಿರುವ ವಿವೇಕ್ ಪಂಡಿತ್‌ರವರನ್ನು ಸಮಿತಿ ಭೇಟಿ ಮಾಡಿತು. ಈ ವ್ಯಕ್ತಿ ತನ್ನನ್ನು ವಿದಾಯತ್ ಸನ್‌ಸಡ್‌ನ ಶ್ರಮಜೀವಿ ಸಂಘಟನೆಯ ಸಂಸ್ಥಾಪಕವೆಂದು, ಸಮರ್ಥನಾ ಸಂಸ್ಥೆಯ ಡೈರೆಕ್ಟರ್ ಎಂದು, ನ್ಯಾಶನಲ್ ಸೆಂಟರ್ ಫಾರ್ ಅಡ್ವೊಕೆಸಿ ಸ್ಟಡಿಸ್‌ನ ಕಾರ್ಯ ನಿರ್ವಾಹಕ ಕಾರ್ಯದರ್ಶಿ ಎಂದು ಆದರ್ ಶೀಲದ ಸಲಹಾಗಾರನೆಂದು ಪರಿಚಯಿಸಿ ಕೊಂಡಿದ್ದಾನೆ. ಈತನ ಪ್ರಕಾರ ಕಿರುಕುಳ ಕುರಿತಂತೆ ವಿಚಾರಣೆ ನಡೆಯಲಿ ಆದರೆ ಅತ್ಯಾಚಾರ ನಡೆದಿರುವುದು ಕಟ್ಟುಕತೆ. ಅದಕ್ಕೆ ಇತರರು ನೀಡಿದ ಕಾರಣಗಳನ್ನೆ ಇವನೂ ಹೇಳಿದ್ದಾನೆ. ಗಾಯತ್ರಿಯವರ ಹೇಳಿಕೆಗಳನ್ನು ಸಂಪೂರ್ಣ ತಳ್ಳಿಹಾಕುವ ಈತ ಮುಖ್ಯ ನ್ಯಾಯಾಧೀಶರ ಮೇಲೆ ಕಠಿಣ ಕ್ರಮ ತೆಗೆದುಕೊಳ್ಳಲು ಒತ್ತಾಯಿಸುತ್ತಾನೆ. ಈತನಿಗೆ ಗಾಯತ್ರಿಯ ಮೇಲೆ ದೌರ್ಜನ್ಯ ನಡೆಸಿದ ಅಧಿಕಾರಗಳ ದೂರಿನ ಮೇಲೆ ಕ್ರಮ ತೆಗೆದು ಕೊಳ್ಳುವುದು ಮುಖ್ಯವಲ್ಲ. ಈ ವಿವೇಕ್ ಪಂಡಿತ್ ಮತ್ತು ಶೈಲೇಶ್ ಪಾಠಕ್ ಇಬ್ಬರು ಐಸನ್ ಹೋವರ್ ಫಲೋಶಿಪ್ ಮೇಲೆ ಅಮೇರಿಕಾದಲ್ಲಿದ್ದಾರೆ ಎಂದು ತಿಳಿದುಬಂದಿದೆ.

**ಸಮಿತಿ ತೆಗೆದುಕೊಂಡ ತೀರ್ಮಾನಗಳು**

ಶಿವಪುರಿಯ D.C., SDOP ಹಾಗೂ ಇತರರ ಮೇಲಿರುವ ಅತ್ಯಾಚಾರ ಕಿರುಕುಳದಂತಹ ಗಂಭೀರ ಆಪಾದನೆಗಳಿಗೆ ನ್ಯಾಯಾಂಗವು ಸರಿಯಾದ ಕ್ರಮವನ್ನು ಆದಷ್ಟು ಬೇಗ ತೆಗೆದುಕೊಳ್ಳಬೇಕು. ಇದು ತುಂಬಾ ಗಂಭೀರವಾದ ಠಾಣೆಯಲ್ಲಿನ ಹಿಂಸೆ, ಮಹಿಳೆಯ ಮೇಲಿನ ಹಿಂಸೆ ಮತ್ತು ಅಧಿಕಾರ ದುರುಪಯೋಗದ ಕೇಸಾಗಿದೆ.

ತಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ನ್ಯಾಯಾಂಗದ ಆಡಳಿತದಲ್ಲಿ ಪ್ರಭಾವ ಬೀರಲು ಪ್ರಯತ್ನಿಸುತ್ತಿರುವುದು ಮತ್ತು ಕೇಸನ್ನು ಹಿಂತೆಗೆದುಕೊಳ್ಳಲು

ವಕೀಲರನ್ನು ಬೆದರಿಸಿರುವುದು, ಜಾಗವನ್ನು ಖಾಲಿ ಮಾಡಲು ಗಾಯತ್ರಿಯವರ ಕುಟುಂಬದರವನ್ನು ಒತ್ತಾಯಿಸುತ್ತಿರುವುದು ಪರಿಸ್ಥಿತಿಯನ್ನು ಗಂಭೀರಗೊಳಿಸಿರುವುದರಿಂದ ತಕ್ಷಣವೇ ಕ್ರಮ ಜರುಗಿಸುವ ಅಗತ್ಯವಿದೆ.

ಡಾಬಾ ಮತ್ತು ಕಛೇರಿಯನ್ನು ನೋಟಿಸು ಜಾರಿ ಮಾಡದೆ ನೆಲಸಮಗೊಳಿಸಿರುವುದು, ಹಸಿರು ಪಟ್ಟಿಮಾಡಿ ಜಾಗವನ್ನು ಒತ್ತುವರಿ ಮಾಡಿಕೊಳ್ಳುವ ಪ್ರಯತ್ನ ಇವೆಲ್ಲವೂ ಕೇಸಿಗೆ ಸಂಬಂಧಿಸಿದಲ್ಲವೆಂದು ಕಂಡರೂ ಆಡಳಿತದಲ್ಲಿರುವ, ಪೊಲೀಸ್ ಇಲಾಖೆಯಲ್ಲಿರುವ ಪ್ರಭಾವಶಾಲಿ ವ್ಯಕ್ತಿಗಳ ಅಧಿಕಾರ ದುರುಪಯೋಗವನ್ನು ಸೂಚಿಸುತ್ತದೆ.

ಸಮಿತಿಯವರಿಗೆ ಕಲೆಕ್ಟರ್ ಅವರು ಗಾಯತ್ರಿಯ ನಡತೆ ಸಂಶಯಾಸ್ಪದವೆಂದು ಹೇಳಿರುವುದು ಸರಿಯಲ್ಲ. ಆ ರೀತಿ ಹೇಳಿರುವುದಕ್ಕೆ ಆಧಾರವೇನೆಂದು ಸಮಿತಿಯು ಕಲೆಕ್ಟರ್ ಹಾಗು ಅವರ ವಕೀಲರನ್ನು ಒತ್ತಾಯಿಸಿದಾಗ ಸರಿಯಾದ ವಿವರಣೆಯನ್ನು ಅವರು ನೀಡಿಲ್ಲ. ಗಾಯತ್ರಿ ಅಲ್ಲಿನ ಪ್ರದೇಶದಲ್ಲಿ ಸಾಕಷ್ಟು ಸಮಾಜ ಸೇವೆ ಮಾಡಿರುವರೆಂದು ತಿಳಿಯುತ್ತದೆ.

ಕೇಸನ್ನು ಕೈ ಬಿಡಲು ಲಾಯರ್ ತಂದೆ ಬೆದರಿಕೆ ಒಡ್ಡಿರುವುದು ಆತಂಕದ ವಿಷಯ.

ಮಾನವ ಹಕ್ಕು ಆಯೋಗದವರ ಪಾತ್ರ ನಿರಾಶಾದಾಯಕವಾದುದು. ಕಸ್ಟಡಿಯಲ್ಲಿ ನಡೆಯುವ ಹಿಂಸೆಗೆ ಸಂಬಂಧಪಟ್ಟ ವಿಚಾರಣೆಯನ್ನು ಪೊಲೀಸ್ ಅಧಿಕಾರಿಗಳ (ಆಪಾದಿತರ) ಮುಂದೆ ನಡೆಸುವ ಅಗತ್ಯವಿರಲಿಲ್ಲ. ನ್ಯಾಯಾಧೀಶರ ಮೇಲಿನ ಆರೋಪ ಕೇಸನ್ನು ಮುಂದೂಡುವುದಾಗಿದೆ. ಇದನ್ನು ನಾವು ವಿರೋಧಿಸುತ್ತೇವೆ.

ನಡೆದಿರುವ ಘಟನೆಗಳನ್ನು ಗಮನಿಸಿದರೆ ವಿಚಾರಣೆಯನ್ನು ರಾಜ್ಯ ಪೊಲೀಸರಿಗೆ ಬಿಡುವುದು ಆತಂಕಕಾರಿಯಾಗಿದೆ. ಲಾಕಪ್ಪಿನಲ್ಲಿ ಹೆಂಗಸರನ್ನು ಇಟ್ಟುಕೊಂಡಿದ್ದು, 6 ಗಂಟೆಯ ನಂತರ ಜೈಲಿಗೆ ಸೇರಿಸಿಕೊಳ್ಳುವುದಿಲ್ಲವೆಂಬುದು, ವಿಚಾರಣೆಗೆ ಒಳಗಾಗ ಬೇಕಾದವರು ಅವರ ಕಸ್ಟಡಿಯಲ್ಲಿ ಇದ್ದರೂ ವಿಚಾರಣೆ ಮುಂದೂಡಿದ್ದು, ಮೂರು, ನಾಲ್ಕು ಬಾರಿ ಹಿಯರಿಂಗ್‌ಗೆ ಹಾಜರು ಪಡಿಸದೆ 4 ತಿಂಗಳ ಕಾಲ ಬೇಲ್ ಸಿಗದಂತೆ ಮಾಡಿದ್ದು ಇವೆಲ್ಲವೂ ರಾಜ್ಯದ ಪೊಲೀಸರ ಮೇಲೆ ಸಂಶಯ ಹುಟ್ಟಿಸುತ್ತದೆ. ಆ ಕಾರಣ ಈ ಕೆಳಗಿನ ಸಲಹೆ, ಬೇಡಿಕೆಗಳನ್ನು ಮುಂದಿಡುತ್ತಿದ್ದೇವೆ.

- ವಿಚಾರಣೆಯನ್ನು CBI ತೆಗೆದುಕೊಳ್ಳಬೇಕು.
- ಗಾಯತ್ರಿ ಮತ್ತವರ ಕುಟುಂಬದವರಿಗೆ ಭಯವಿರುವುದರಿಂದ ರಕ್ಷಣೆ ನೀಡಬೇಕು.
- ವಸ್ತುನಿಷ್ಠ, ನ್ಯಾಯಯುತ ವಿಚಾರಣೆ ನಡೆಸುವ ಸಲುವಾಗಿ ವಿಚಾರಣೆ ಮುಗಿಯುವವರೆಗೂ ಸಂಬಂಧಪಟ್ಟ ಅಧಿಕಾರಿಗಳನ್ನು ಮುಖ್ಯವಾಗಿ ಪಾಠಕ್ ಮತ್ತು ಭಗವಾನ್ ಅವರುಗಳನ್ನು ಅಮಾನತ್ತಿನಲ್ಲಿಡಬೇಕು ಮತ್ತು ಜಿಲ್ಲೆಯ ಹೊರಗೆ ವರ್ಗಾಯಿಸಬೇಕು.
- ಶಿವಪುರಿಯ ಆಡಳಿತ ವರ್ಗ ನಡೆಸಿರುವ ವರ್ತನೆಗೆ ಸರ್ಕಾರ ಜವಾಬ್ದಾರಿ ಹೊತ್ತುಕೊಂಡು ಕುಟುಂಬದ ಪುನರ್ವಸತಿಗೆ ತಕ್ಕ ಕ್ರಮ ಕೈಗೊಳ್ಳಬೇಕು.

*ಕನ್ನಡಕ್ಕೆ : ಸರಸ್ವತಿ ದು*

*D. M. District Magistrate*
*S.P.-Superintedent of Police*
*SDOP-Sub divisional Officer*

*ಗಾಯತ್ರಿಯವರಿಗೆ ಬೆಂಬಲ ಸೂಚಿಸಲು ಕೆಳಗಿನ ವಿಳಾಸಕ್ಕೆ ಪತ್ರ ಬರೆಯಬಹುದು. ಹಾಗೂ ಇವರಿಗೆ ಆರ್ಥಿಕ ನೆರವು ನೀಡಲು ಈ ಮೂಲಕ ಕೋರಲಾಗಿದೆ.*

ಸಂಪರ್ಕ ವಿಳಾಸ: *ಗಾಯತ್ರಿದೇವಿ*
*C/o ಶಮೀಮ್, ಶ್ರಮಿಕ್ ಆದಿವಾಸಿ ಸಂಘಟನ*
*ಪಾಟ್ಟಾಪುರ, ಶ್ಯಾಪುರ್ - 460440 ಡಿ. ಬೆಟುಲ್*

---

*"ಇಂದು ವ್ಯಾಪಕವಾಗಿ, ತ್ವರಿತಗತಿಯಲ್ಲಿ ಬೆಳೆಯುತ್ತಿರುವ ಕಂಪನಿಗಳ ಪಟ್ಟಿಯನ್ನು ಕಾಣಬಹುದು. ಇವು ಸರದಿಯಂತೆ ಒಂದು ಗುಂಪಿಗೆ ಸೇರುವ ರಾಷ್ಟ್ರಗಳು ಉತ್ಪಾದಿಸಿದ ಕಚ್ಚಾ ಸಾಮಗ್ರಿಗಳನ್ನು ಇನ್ನೊಂದು ಗುಂಪಿಗೆ ಸೇರಿದ ರಾಷ್ಟ್ರಗಳಲ್ಲಿರುವ ಕಾರ್ಮಿಕ ಶಕ್ತಿ ಮತ್ತು ಕಾರ್ಖಾನೆಗಳ ಸೌಲಭ್ಯವನ್ನು ಬಳಸಿಕೊಂಡು ಮಾರುಕಟ್ಟೆಯ ವಸ್ತುಗಳನ್ನಾಗಿ ಪರಿವರ್ತಿಸುತ್ತವೆ. ಈ ವಸ್ತುಗಳನ್ನು ಮೂರನೆಯ ಗುಂಪಿನ ರಾಷ್ಟ್ರಗಳಲ್ಲಿ ಮಾರುತ್ತವೆ. ಧಿಡೀರ್ ಸಂಪರ್ಕ ಸಾಧನಗಳು, ಶೀಘ್ರಗತಿಯ ಸಂಚಾರ, ಕಂಪ್ಯೂಟರ್ ಮತ್ತು ಆಧುನಿಕ ನಿರ್ವಹಣಾ ತಂತ್ರಗಳು ಮುಂತಾದವುಗಳನ್ನು ಬಳಸಿಕೊಂಡು ಸಂಪನ್ಮೂಲಗಳನ್ನು ಮರುಪೂರೈಸುತ್ತಿವೆ. ಬೆಲೆಗಳ ಏರಿಳಿಕೆ, ಕಾರ್ಮಿಕರು ಮತ್ತು ಕಚ್ಚಾಸಾಮಗ್ರಿಗಳ ಲಭ್ಯತೆಗಳಿಗನುಗುಣವಾಗಿ ತಿಂಗಳಿಂದ ತಿಂಗಳಿಗೆ ಉತ್ಪಾದನೆ ಮತ್ತು ವಿತರಣೆಯ ಮಾದರಿಗಳನ್ನು ಬದಲಿಸುತ್ತಾ ಇವೆ."*

ಜಾರ್ಜ್ ಬಾಲ್

*("Cosmocorp : The Importance of Being Stateless" : Columbia Journal of World Business: November-December : 1967 : p. 26)*

# ವಚನ ಸಂಸ್ಕೃತಿಯ ಜೈವಿಕ ನಿಯತಿ ಮತ್ತು ಸಾಮಾಜಿಕ ಆಯಾಮಗಳು : ಒಂದು ಲಿಂಗ ಸಂಬಂಧಿ ಅಧ್ಯಯನ

**ಪ್ರಸ್ತಾವನೆ :**

ಲಿಂಗ ಸಂಬಂಧಗಳನ್ನು ಜೈವಿಕ ನಿಯತಿ (Biological determinism)ಯ ನೆಲೆಯಲ್ಲಿ ಪರಿಭಾವಿಸಿಕೊಳ್ಳುವುದು ರೂಢಿಯಲ್ಲಿದೆ. ಇದು ಭಾರತಕ್ಕೆ ಅಥವಾ ಕರ್ನಾಟಕಕ್ಕೆ ಸೀಮಿತವಾದ ಸಂಗತಿಯೇನಲ್ಲ. ಇದೊಂದು ಸಾರ್ವತ್ರಿಕ ನಂಬಿಕೆಯಾಗಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಇದಕ್ಕೆ ತುಂಬಾ ಗಟ್ಟಿಯಾದ ಹಾಗೂ ವಿಶಾಲವಾದ ನೆಲೆ ಇರುವುದನ್ನು ನೋಡಬಹುದು. ಇಲ್ಲಿ ಜೈವಿಕ ನಿಯತಿಯೆಂಬುದು ಧಾರ್ಮಿಕ ಶ್ರದ್ಧೆಯಾಗಿಬಿಟ್ಟಿದೆ ಮತ್ತು ಅದೊಂದು ಧಾರ್ಮಿಕ ನಂಬಿಕೆಯಾಗಿದೆ. ವರ್ಣಾಶ್ರಮ ಧರ್ಮದ ಹಿನ್ನೆಲೆಯಲ್ಲಿ ಜೈವಿಕ ನಿಯತಿಯನ್ನು ಪರಿಭಾವಿಸಿಕೊಂಡಾಗ ನಮಗೆ ಅದರ ಮಹತ್ವವು ಅರಿವಿಗೆ ಬರುತ್ತದೆ. ವರ್ಣಾಶ್ರಮ ಧರ್ಮವು ಪ್ರತಿಪಾದಿಸುವಂತೆ ಜಾತಿಭೇದವೆನ್ನುವುದು ಹುಟ್ಟುತ್ತಲೇ ಪ್ರಾಪ್ತವಾಗುವ ಒಂದು ಸಂಗತಿಯಾಗಿದೆ. ತಲೆಯ ಭಾಗದಿಂದ ಹುಟ್ಟಿದವನು ಶ್ರೇಷ್ಠ, ಮುಂಡದ ಭಾಗದಿಂದ ಹುಟ್ಟಿದವನು ಮಧ್ಯಮ ಮತ್ತು ಕಾಲಿನಿಂದ ಹುಟ್ಟಿದವನು ಕನಿಷ್ಟ -ಶೂದ್ರ ಎಂಬುದು ವರ್ಣಾಶ್ರಮದ ತುಂಬ ಸರಳವಾದ ನಿರ್ವಚನವಾಗಿದೆ. ಜೈವಿಕ ನಿಯತಿಯಲ್ಲಿ ಶ್ರೇಷ್ಠ-ಕನಿಷ್ಟ ಎಂಬ ಸಂಗತಿಗಳು ಅಂತರ್ಗತಗೊಂಡಿರುತ್ತವೆ. ಈ ಸಂಗತಿಗಳು, ಅಂದರೆ ಶ್ರೇಷ್ಠ-ಕನಿಷ್ಟ, ಪವಿತ್ರ-ಅಪವಿತ್ರ, ಮೇಲು-ಕೀಳು ಹಾಗೂ ಹೆಣ್ಣು-ಗಂಡು ಎಲ್ಲವೂ ಹುಟ್ಟುತ್ತಲೇ ಪ್ರಾಪ್ತವಾಗುವ ಸಂಗತಿಗಳೇ ವಿನಾ ಸಾಮಾಜಿಕವಾಗಿ ಕಟ್ಟಿಕೊಂಡ ಉಪಾಧಿಗಳಲ್ಲ ಎಂಬುದು ರೂಢಿಯಲ್ಲಿರುವ ನಂಬಿಕೆಯಾಗಿದೆ. ಈ ವಿಚಾರ ಪ್ರಣಾಳಿಕೆಯಲ್ಲಿ ಹೆಣ್ಣನ್ನು ಪ್ರಕೃತಿಗೆ ಸಂವಾದಿಯನ್ನಾಗಿ ಮಾಡಿ ಗಂಡನ್ನು ಸಂಸ್ಕೃತಿಗೆ ಸಂವಾದಿಯನ್ನಾಗಿ ಮಾಡಲಾಗಿದೆ. ಇಲ್ಲಿ ಹೆಣ್ಣು, ಅಂದರೆ ಪ್ರಕೃತಿಯು ಕನಿಷ್ಟ, ಗಂಡು ಅಂದರೆ ಸಂಸ್ಕೃತಿಯು ಶ್ರೇಷ್ಠ.

ಈ ಬಗೆಯ ಜೈವಿಕ ನಿಯತಿಯನ್ನು ಆಧರಿಸಿದ ವಿಚಾರ ಪ್ರಣಾಳಿಕೆಯನ್ನು ವಚನ ಸಂಸ್ಕೃತಿಯು ಪ್ರಜ್ಞಾ ಪೂರ್ವಕವಾಗಿ ತಿರಸ್ಕರಿಸಿರುವುದನ್ನು ಗಮನಿಸಬೇಕಾದ ಸಂಗತಿಯಾಗಿದೆ. ಮನುಷ್ಯ ಸಂಬಂಧಗಳನ್ನು ಹಾಗೂ ಲಿಂಗ ಸಂಬಂಧಗಳನ್ನು ಅದು ಸಾಮಾಜಿಕ ನೆಲೆಯಲ್ಲಿ ಪರಿಭಾವಿಸಿಕೊಳ್ಳಲು ಪ್ರಯತ್ನಿಸಿತು. ಅದು ಜೈವಿಕ ನಿಯತಿಯನ್ನು ತಿರಸ್ಕರಿಸುವುದರ ಜೊತೆಗೆ ಅದರಲ್ಲಿ ಅಂತರ್ಗತಗೊಂಡಿದ್ದ ತಾರತಮ್ಯವಾದಿತ್ವವನ್ನು ತಿರಸ್ಕರಿಸಿತು. ಈ ವಿಚಾರವನ್ನು ಜೇಡರ ದಾಸಿಮಯ್ಯನು ತನ್ನ ಒಂದು ವಚನದಲ್ಲಿ ತುಂಬಾ ಅರ್ಥಪೂರ್ಣವಾಗಿ ಮಂಡಿಸಿದ್ದಾನೆ.

> ಮಡದಿಯ ಪ್ರಾಣಕ್ಕೆ ಮೊಲೆ ಮುಡಿಯಿದ್ದೀತೆ?
> ಒಡೆಯರ ಪ್ರಾಣಕ್ಕೆ ಇದ್ದೀತೆ ಯಜ್ಞೋಪವೀತ?
> ಕಡೆಯಲ್ಲಿದ್ದ ಅಂತ್ಯ ಜನು ಹಿಡಿದಿದ್ದನೆ ಹಿತಿಗೋಲ?
> ನೀ ತೊಡಕ್ಕಿಕ್ಕಿದ ತೊಡಕ ನೀಲೋಕದ ಜನರತ್ತ
> ಬಲ್ಲರೈ ರಾಮನಾಥ
>
> *(ಜೇಡರ ದಾಸಿಮಯ್ಯ)*

ಯಜ್ಞೋಪವೀತ ಧರಿಸಿದ ಒಡೆಯ ಮೇಲೆ ಮತ್ತು ಹಿತಿಗೋಲ ಹಿಡಿದ ಅಂತ್ಯಜನು ಕಡೆ ಎಂಬ ವರ್ಣಾಶ್ರಮ ಧರ್ಮದ ನಂಬಿಕೆಯನ್ನು ದಾಸಿಮಯ್ಯರು ಪ್ರಶ್ನಿಸುತ್ತಿದ್ದಾರೆ. ಲಿಂಗ ಸಂಬಂಧಗಳನ್ನು ಕುರಿತಂತೆ ಇರುವ ಜೈವಿಕ ನಿಯತಿಯನ್ನು ದಾಸಮಯ್ಯರು ಪ್ರಶ್ನಿಸುತ್ತಿದ್ದಾರೆ. ಮಹಿಳೆ-ಪುರುಷ, ಒಡೆಯ - ಅಂತ್ಯಜ ಹಾಗೂ ಯಜ್ಞೋಪವೀತ-ಹಿರಗೋಲ - ಇವು ಸಾಮಾಜಿಕ ಉಪಾಧಿಗಳೇ ವಿನಾ ಹುಟ್ಟಿದ-ಜೈವಿಕ ಸಂಗತಿಗಳಲ್ಲ, ದಾಸಿಮಯ್ಯರ ಪ್ರಕಾರ ಇವೆಲ್ಲ ಸಮಾಜವು ಕಟ್ಟಿಕೊಂಡ ಸಂಗತಿಗಳಾಗಿವೆ. ಇವು ಹುಟ್ಟಿದ ಸಂಗತಿಗಳಲ್ಲ. ಯಜ್ಞೋಪವೀತವನ್ನಾಗಲಿ ಅಥವಾ ಹಿಡಿಗೋಲನ್ನಾಗಲಿ ಧರಿಸಿಕೊಂಡೇ ಯಾರೂ ಹುಟ್ಟುವುದಿಲ್ಲ. ತಲೆಯಿಂದ, ಮುಂಡದಿಂದ - ಕಾಲಿನಿಂದ ಯಾರೂ ಹುಟ್ಟುವುದಿಲ್ಲ. ಇವೆಲ್ಲವೂ ಸಾಮಾಜಿಕವಾಗಿ ಪ್ರಾಪ್ತವಾಗುವ ಸಂಗತಿಗಳು. ಜೈವಿಕತೆ ಹಾಗೂ ಸಾಮಾಜಿಕತೆಗಳ ನಡುವಿನ ಭಿನ್ನತೆಯನ್ನು ದಾಸಿಮಯ್ಯರು ತಮ್ಮ ವಚನದಲ್ಲಿ ಅತ್ಯಂತ ಸಂಕೀರ್ಣ ನೆಲೆಯಲ್ಲಿ ಹಿಡಿದಿಟ್ಟಿದ್ದಾರೆ. ಒಡೆತನ-ಕಡೆತನ ಇವು ಸಾಮಾಜಿಕವಾಗಿ ನಿಯಮಿಸಿರುವ ಸ್ಥಾನಮಾನಗಳು. ಇವು ಸಾಮಾಜಿಕವಾಗಿ ಪ್ರಾಪ್ತವಾಗುವ ಉಪಾಧಿಗಳು, ಜೈವಿಕತೆ-ಸಾಮಾಜಿಕತೆಗಳ ನಡುವಿನ ಭಿನ್ನತೆಗಳು ಸೂಕ್ಷ್ಮವಾಗಿರುತ್ತವೆ. ಅವು ಸರಳವಾಗಿ ಗೋಚರಿಸುವುದಿಲ್ಲ, ದಾಸಿಮಯ್ಯರು ಅವನ್ನು 'ತೊಡಕ್ಕಿಕ್ಕಿದ ತೊಡಕು' ಎಂದು ಕರೆದಿದ್ದಾರೆ. ಈ ತೊಡಕನ್ನು ನಿವಾರಿಸಿ ಕೊಂಡರೆ - ಅರ್ಥ ಮಾಡಿಕೊಂಡರೆ ಯಾವುದು ಜೈವಿಕ, ಯಾವುದು ಸಾಮಾಜಿಕ ಎಂಬುದು ತಿಳಿಯುತ್ತದೆ ಎಂದು ಇಲ್ಲಿ ಹೇಳಲಾಗಿದೆ.

ದಾಸಿಮಯ್ಯರ ವಚನದಲ್ಲಿ ಮೂರು ಪ್ರಶ್ನೆಗಳಿವೆ. ಮೊದಲನೆಯ ಪ್ರಶ್ನೆಯು ಲಿಂಗ ಸಂಬಂಧಗಳನ್ನು ಕುರಿತದ್ದಾದರೆ

ಎರಡನೆಯದು ಒಡೆಯ-ಯಜ್ಞೋಪವೀತವನ್ನು ಕುರಿತದ್ದಾಗಿದೆ. ಮೂರನೆಯದು ಅಂತ್ಯಜ-ಹಿಡಿಗೋಲ ಇವುಗಳಿಗೆ ಸಂಬಂಧಿಸಿದ್ದಾಗಿದೆ. ಈ ಸಂಗತಿಗಳ ಜೈವಿಕ ನೆಲೆಗಳ ಬಗ್ಗೆ ದಾಸಿಮಯ್ಯರಿಗೆ ಅನುಮಾನವಿದೆ. ಆದ್ದರಿಂದಲೇ ಅವು ಇಲ್ಲಿ ಪ್ರಶ್ನೆಗಳಾಗಿವೆ. ದಾಸಿಮಯ್ಯರಿಗೆ ಅವು ತೊಡಕುಗಳು. ಈ ತೊಡಕನ್ನು ಬಿಡಿಸಿಕೊಳ್ಳಬೇಕು ಎಂಬುದು ದಾಸಿಮಯ್ಯರ ಕರೆಯಾಗಿದೆ.

ದಾಸಿಮಯ್ಯರ ವಿಚಾರವನ್ನು ಸಮರ್ಥಿಸುವ ರೀತಿಯಲ್ಲಿ ಲಿಂಗ ಸಂಬಂಧಿಗಳ ಸಾಮಾಜಿಕ ನೆಲೆಯನ್ನು ಸತ್ಯಕ್ಕನೆಂಬ ಶಿವ ಶರಣೆಯು ಕೆಳಗಿನ ವಚನದಲ್ಲಿ ಪ್ರತಿಪಾದಿಸಿದ್ದಾಳೆ.

**ಮೊಲೆ ಮುಡಿ ಇದ್ದುದೆ ಹೆಣ್ಣೆಂದು ಪ್ರಮಾಣಿಸಲಿಲ್ಲ**
**ಕಾಸೆ ಮೀಸೆ ಕಠಾರವಿದ್ದುದೆ ಗಂಡೆಂದು ಪ್ರಮಾಣಿಸಲಿಲ್ಲ**
**ಅದು ಜಗದಹಾಹೆ. ಬಲ್ಲವರ ನೀತಿಯಲ್ಲ**
**ಏತರ ಹಣ್ಣಾದರೂ ಮಧುರವೇ ಕಾರಣ**
**ಅಂದವಿಲ್ಲದ ಕುಸುಮಕ್ಕೆ ವಾಸನೆಯು ಕಾರಣ**
**ಇದರಂದವ ನೀನೆ ಬಲ್ಲೆ ಶಂಭು ಜಕ್ಕೇಶ್ವರಾ**

*(ಸತ್ಯಕ್ಕ)*

ಸತ್ಯಕ್ಕನ ಪ್ರಕಾರ ದೈಹಿಕ-ಬಾಹ್ಯ ಉಪಾಧಿಗಳು ಲಿಂಗ ನಿರ್ದಿಷ್ಟವಾಗಿರುವುದಿಲ್ಲ. ಅವುಗಳನ್ನು ಲಿಂಗ ನಿರ್ದಿಷ್ಟವನ್ನಾಗಿ ಜಗತ್ತು ಕಟ್ಟಿಕೊಂಡಿದೆ. ಅವು ಜೈವಿಕವಾಗಿ ನಿಯತಿಗೊಂಡ ಸಂಗತಿಗಳಲ್ಲ. 'ಅದು ಜಗದ ಹಾಹೆ' ಎಂಬ ನುಡಿಯಲ್ಲಿ ಇದು ಸ್ಪಷ್ಟವಾಗಿದೆ. ಈ ಸಂಗತಿಗಳು ಜೈವಿಕವೆಂದು ತಿಳಿಯುವುದು ಅಜ್ಞಾನ. ಅವು ಸಾಮಾಜಿಕವೆಂದು ತಿಳಿಯುವುದು ಜ್ಞಾನ ಬಲ್ಲವರು, ಅಂದರೆ ಜ್ಞಾನಿಗಳು ಜೈವಿಕತೆ-ಸಾಮಾಜಿಕತೆಗಳ ನಡುವಿನ ಭಿನ್ನತೆಗಳನ್ನು ಅರ್ಥ ಮಾಡಿಕೊಳ್ಳುತ್ತಾರೆ ಎಂಬುದು ಸತ್ಯಕ್ಕನ ನಿಲುವಾಗಿದೆ. ಜಗತ್ತು ಕಟ್ಟಿಕೊಂಡಿರುವ ಸಂಗತಿಯಾಗಿರುವುದರಿಂದ ಇಲ್ಲಿ ತಾರತಮ್ಯವಿದೆ. ಹೀಗೆ ವಚನ ಸಂಸ್ಕೃತಿಯು ಲಿಂಗ ಸಂಬಂಧಗಳ ಜೈವಿಕ ನಿಯತಿ ವಿಚಾರ ಪ್ರಣಾಳಿಕೆಯನ್ನು ತಿರಸ್ಕರಿಸಿದೆ. ವಚನಕಾರರು ಜೈವಿಕ ನಿಯತಿಯನ್ನು ಪ್ರಶ್ನಿಸುವುದರ ಮೂಲಕ ವರ್ಣಾಶ್ರಮ ಪ್ರಣೀತ ವಿಚಾರ ಪ್ರಣಾಳಿಕೆಗೆ ದೊಡ್ಡದಾದ ಪೆಟ್ಟನ್ನು ನೀಡಿದರು.

**ಒಡಲು-ಒಡವೆ**

ಹೆಣ್ಣನ್ನು-ಮಹಿಳೆಯನ್ನು ಮನುಷ್ಯ ಜೀವಿಯನ್ನಾಗಿ ಪರಿಭಾವಿಸಿಕೊಳ್ಳುವ ಪರಿ ಯಾವ ಸಮಾಜದಲ್ಲೂ ವಾಡಿಕೆಯಲ್ಲಿಲ್ಲ. ನಮ್ಮ ಸಮಾಜದ ಸಂದರ್ಭದಲ್ಲಿ ಹೆಣ್ಣನ್ನು ತಾಯಿಯೆಂದು ಪರಿಭಾವಿಸುವುದು ರೂಢಿಯಲ್ಲಿದೆ. ಭಾರತೀಯ ಸಂಪ್ರದಾಯದಲ್ಲಿ ಇದು ಆಳವಾಗಿ ಬೇರುಬಿಟ್ಟಿದೆ. ತಾಯಿಯಾಗಿ ಮಾತ್ರವೇ ಹೆಣ್ಣಿಗೆ ಸಾರ್ಥಕ್ಯ ಎಂಬ ನಂಬಿಕೆ ಇಲ್ಲಿದೆ. ಇಲ್ಲಿ ಮಹಿಳೆಯನ್ನು ಸಂತಾನೋತ್ಪತ್ತಿ ಜವಾಬುದಾರಿಗೆ ತಳುಕು ಹಾಕಿಬಿಡಲಾಗಿದೆ. ಮಹಿಳೆಯನ್ನು 'ಒಡವೆ' - 'ಆಸ್ತಿ'ಯೆಂದು ನಮ್ಮ ಸಮಾಜದಲ್ಲಿ ಪರಿಗಣಿಸುತ್ತಾ ಬರಲಾಗಿದೆ. ಜೀವವಿರುವ ಒಡಲನ್ನು ಜೀವವಿಲ್ಲದ 'ಒಡವೆ'ಯೆಂದು ಪರಿಗಣಿಸುತ್ತಾ ಬರಲಾಗಿದೆ. ಈ ಬಗೆಯ ಧೋರಣೆ ವಚನ ಸಂಸ್ಕೃತಿಯಲ್ಲೂ ಅಂತರ್ಗತವಾಗಿರುವುದನ್ನು ನೋಡಬಹುದು. ಚಾರಿತ್ರಿಕವಾಗಿ 'ಆಸ್ತಿ' - 'property' ಎಂಬ ಉಪಾದಿತ್ವವನ್ನು ಪಡೆದುಕೊಂಡ ಪ್ರಥಮ ಸಂಗತಿಯೆಂದರೆ 'ಹೆಣ್ಣು' ಎಂದು ಹೇಳಲಾಗಿದೆ. ಇದು ಆಸ್ತಿಯಾಗಿರುವುದರಿಂದ ಅದರ ಮೇಲೆ ಮಾಲೀಕತ್ವವು ಸಾಧ್ಯ ಮತ್ತು ಮಾಲೀಕತ್ವದ ವರ್ಗಾವಣೆಯೂ ಸಾಧ್ಯ. ಈ ದಿಶೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಚನಗಳು ಇಲ್ಲಿವೆ.

**ಹೊನ್ನು ಹೆಣ್ಣು ಮಣ್ಣನಾವರಿಸಿಕೊಂಡು**
**ಒಡವೆ ಆಭರಣಂಗಳ ಹಲ್ಲಣಿಸಿಕೊಂಡು ಬಂದು**
**ಸರ್ವರಿಗೆ................................**
**....................ಕಲಿದೇವರ ದೇವ**

*(ಮಡಿವಾಳ ಮಾಚದೇವ)*

**ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ**
**ವೃಥಾಯ..............................**
**...................................................**
**..................ಅಶುದ್ಧನ ಶುದ್ಧನ ಮಾಡಿದನಾಗಿ**

*(ಬಸವಣ್ಣ)*

**ಹೊನ್ನುಳ್ಳಾತ ಭಕ್ತನಲ್ಲ, ಹೆಣ್ಣುಳ್ಳಾತ ಶರಣನಲ್ಲ**
**ಮಣ್ಣುಳ್ಳಾನ ಲಿಂಗೈಕ್ಯನಲ್ಲ**
**ಹೊನ್ನು ಜೀವ ಹೆಣ್ಣು ಪ್ರಾಣ ಮಣ್ಣು ದೇಹ**
**ಹೊನ್ನು ಭಾವ ಹೆಣ್ಣು ಭವಿ ಮಣ್ಣು ಹಮ್ಮು**
**ಇಂತಿ ತ್ರಿವಿಧ ಸ್ಥಲವಪೂರ್ವ**
**ಕೂಡಲ ಚೆನ್ನಸಂಗಯ್ಯನಲ್ಲಿ**

*(ಚೆನ್ನಬಸವಣ್ಣ)*

ಮೇಲಿನ ಮೂರು ವಚನಗಳಲ್ಲಿ ಹೆಣ್ಣನ್ನು ಹೊನ್ನು ಮತ್ತು ಮಣ್ಣು ಇವುಗಳಿಗೆ ಸಂವಾದಿಯಾಗಿ ಬಳಸಲಾಗಿದೆ. ಹೊನ್ನು ಮತ್ತು ಮಣ್ಣು ಇವು ಆಸ್ತಿಗಳಾಗಿವೆ. ಅವುಗಳ ಮೇಲೆ ಮಾಲೀಕತ್ವವನ್ನು ಸಾಧಿಸಬಹುದು. ಅವುಗಳ ಮೇಲಿನ ಮಾಲೀಕತ್ವವನ್ನು ವರ್ಗಾಯಿಸಬಹುದು. ಹೊನ್ನು, ಹೆಣ್ಣು ಮತ್ತು ಮಣ್ಣು ಇವುಗಳನ್ನು ಪಡೆನುಡಿಗಳಾಗಿ ಬಳಸುವುದು ವಾಡಿಕೆಯಲ್ಲದೆ. ಹೆಣ್ಣನ್ನು ಇಲ್ಲಿ ಆಸ್ತಿಯ-ಒಡವೆಯ ಮಟ್ಟಕ್ಕೆ ಇಳಿಸಿರುವುದನ್ನು ನೋಡಬಹುದಾಗಿದೆ. ಚೆನ್ನಬಸವಣ್ಣನು ಹೆಣ್ಣನ್ನು 'ಭವಿ'ಯೆಂದು ಕರೆದಿದ್ದಾನೆ. ಅವನ ಪ್ರಕಾರ ಹೆಣ್ಣಿಗೆ ಮುಕ್ತಿಯಿಲ್ಲ. ಆಕೆಯು ಭವಿಯಾದ ಕಾರಣ ಶರಣೆಯಾಗಲು ಸಾಧ್ಯವಿಲ್ಲ. ಆಕೆಗೆ ಆಧ್ಯಾತ್ಮದ ಹಕ್ಕಿಲ್ಲ. ಇದು ವೈದಿಕ ವಿಚಾರಕ್ಕೆ ಬಹಳ ಸಮೀಪದಲ್ಲಿದೆ.

ಈ ಬಗೆಯ ಧೋರಣೆಯನ್ನು ಪ್ರಶ್ನೆ ಮಾಡುವ ಪರಿಯೂ ವಚನ ಸಂಸ್ಕೃತಿಯಲ್ಲಿದೆ. ವಚನ ಸಂಸ್ಕೃತಿಯಲ್ಲಿ ಲಿಂಗ ಸಮಾನತೆಯನ್ನು ಪ್ರತಿಪಾದಿಸುವ ಧ್ವನಿಯಿರುವಂತೆ ಲಿಂಗ ಅಸಮಾನತೆಯನ್ನು ಜೈವಿಕ ನೆಲೆಯಲ್ಲಿ ಮಂಡಿಸುವ ಧೋರಣೆಯೂ ಇದೆ.

ಇದೊಂದು ಅಸಹಜವಾದ ಸಂಗತಿಯೇನಲ್ಲ. ಪ್ರಗತಿಪರ ಧೋರಣೆಯ ಜೊತೆಯಲ್ಲಿ ಪ್ರತಿಗಾಮಿ ಧೋರಣೆಯೂ ಪ್ರವಹಿಸುವುದನ್ನು ಇಂದಿಗೂ ನೋಡಬಹುದಾಗಿದೆ. ಒಂದು ಪ್ರಗತಿ ಪರವಾದ ವಿಚಾರದ ಆಂದೋಳನ ಚಳುವಳಿಯೊಂದು ಹುಟ್ಟಿಕೊಂಡಾಗ ಅದಕ್ಕೆ ಅಪಸ್ವರಗಳು ಅಲ್ಲಿ ಮೂಡುವುದು ಸಾಮಾನ್ಯ.

ಜೀವವಿರುವ ಒಡಲನ್ನು ಒಡವೆಯನ್ನಾಗಿ ಪರಿಭಾವಿಸಿ ಕೊಳ್ಳುವ ಪರಿಯನ್ನು ಗೊಗ್ಗವ್ವೆಯು ಹೀಗೆ ಪ್ರಶ್ನಿಸುತ್ತಿದ್ದಾಳೆ.

**ಗಂಡು ಮೋಹಿಸಿ ಹೆಣ್ಣ ಹಿರಿದಡೆ**
**ಅದು ಒಬ್ಬರ ಒಡವೆಯೆಂದರಿಯಬೇಕು.**
**ಹೆಣ್ಣು ಮೋಹಿಸಿ ಗಂಡ ಹಿರಿದಡೆ**
**ಉತ್ತರವಾವುದೆಂದರಿಯಬೇಕು.**
**ಈ ಎರಡರ ಉಭಯವ ಕಳೆದು ಸುಖ ತಾನಾಗಬಲ್ಲಡೆ**
**ನಾಸ್ತಿನಾಥನು ಪರಿಪೂರ್ಣನೆಂಬೆ.**

*(ಗೊಗ್ಗವ್ವೆ)*

ಹೆಣ್ಣನ್ನು ಒಡವೆಯೆಂದು ಪರಿಭಾವಿಸಿಕೊಳ್ಳುವ ಸಾಮಾಜಿಕವಾದ ನಂಬಿಕೆಯೊಂದರ ಹಿನ್ನೆಲೆಯಲ್ಲಿ ಗೊಗ್ಗವ್ವೆಯ ವಚನ ಪ್ರಾರಂಭವಾಗುತ್ತದೆ. ಅವಳ ಪ್ರಕಾರ ಹೆಣ್ಣನ್ನು ಒಡವೆಯೆಂದು ಪರಿಗಣಿಸುವುದಾದರೆ ಅಲ್ಲಿ ತಪ್ಪೇನಿಲ್ಲ. ಆದರೆ ಹೆಣ್ಣನ್ನು ಒಡವೆಯೆಂದು ಪರಿಗಣಿಸುವ ಧೋರಣೆಯನ್ನು ಒಪ್ಪಿಕೊಂಡರೆ ಗಂಡನ್ನು ಒಡವೆಯೆಂದು ಪರಿಗಣಿಸ ಬೇಕಾಗುತ್ತದೆ ಎಂಬುದು ಗೊಗ್ಗವ್ವೆಯ ತರ್ಕ. ಗಂಡಿಗೆ ಹೆಣ್ಣು ಒಡವೆಯೆಂದಾದರೆ ಹೆಣ್ಣಿಗೆ ಗಂಡು ಒಡವೆಯಾಗಬೇಕು. ಆದರೆ ಗೊಗ್ಗವ್ವೆಯ ಒಡವೆ ಸಂಸ್ಕೃತಿಯನ್ನು ವಿರೋಧಿಸಿ ಒಡಲ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಿದ್ದಾಳೆ. ಆಕೆಯ ಪ್ರಕಾರ ಯಾರು ಯಾರಿಗೂ ಒಡವೆಯಲ್ಲ. ಉಭಯವಾದಿ ಒಡವೆತನವನ್ನು ಮೀರುವ ಮಾತನ್ನು ಗೊಗ್ಗವ್ವೆ ಇಲ್ಲಿ ಆಡುತ್ತಿದ್ದಾಳೆ. ಗಂಡು ಹೆಣ್ಣನ್ನು ಮತ್ತು ಹೆಣ್ಣು ಗಂಡನ್ನು ಒಡವೆಯೆಂದು ಪರಿಭಾವಿಸುವ ನೆಲೆಯನ್ನು ಗೊಗ್ಗವ್ವೆ ಪ್ರಶ್ನಿಸುತ್ತಿದ್ದಾಳೆ. ಪರಿಪೂರ್ಣತೆ ಸಾಧ್ಯವಾಗಬೇಕಾದರೆ ಈ ಉಭಯತನವನ್ನು ಮೀರಬೇಕಾಗಿದೆ. ವಚನ ಸಂಸ್ಕೃತಿಯು ಪ್ರತಿಪಾದಿಸುತ್ತಿರುವ ವಿಚಾರ ಪ್ರಣಾಳಿಕೆಯಲ್ಲಿ ಮನುಷ್ಯರನ್ನು - ಅವರು ಮಹಿಳೆಯರಿರಲಿ ಅಥವಾ ಪುರುಷರಿರಲಿ - ಒಡವೆಯೆಂದು ಪರಿಗಣಿಸಲು ಸಾಧ್ಯವಿಲ್ಲ ಎಂಬುದು ಗೊಗ್ಗವ್ವೆಯ ನಂಬಿಕೆಯಾಗಿದೆ.

ಹೊನ್ನು, ಹೆಣ್ಣು ಮತ್ತು ಮಣ್ಣು-ಇವುಗಳನ್ನು ಅಲ್ಲಮನು ಬೇರೆ ನೆಲೆಯಲ್ಲಿ ಪರಿಭಾವಿಸಿಕೊಳ್ಳಲು ಪ್ರಯತ್ನಿಸಿದ್ದಾನೆ. ಇದಕ್ಕೆ ಸಂಬಂಧಿಸಿದಂತೆ ಅವನ ಒಂದು ವಚನವನ್ನು ನೋಡಬಹುದು.

**ಹೊನ್ನು ಮಾಯೆ ಎಂಬರು ಹೊನ್ನು ಮಾಯೆಯಲ್ಲ**
**ಹೆಣ್ಣು ಮಾಯೆ ಎಂಬುದು ಹೆಣ್ಣು ಮಾಯೆಯಲ್ಲ**
**ಮಣ್ಣು ಮಾಯೆ ಎಂಬರು ಮಣ್ಣು ಮಾಯೆಯಲ್ಲ**
**ಮನದ ಮುಂದಣ ಆಸೆಯೆ ಮಾಯೆ ಕಾಣ ಗುಹೇಶ್ವರಾ**

*(ಅಲ್ಲಮಪ್ರಭು)*

ಅಲ್ಲಮ್ಮನ ಪ್ರಕಾರ ಅಪಾಯವಿರುವುದು ವಿಷಯಾ ಸಕ್ತಿಯಲ್ಲೇ ವಿನಾ ಹೊನ್ನು ಹೆಣ್ಣು ಮಣ್ಣಿನಲ್ಲಲ್ಲ. ವಿಷಯ ವನ್ನು ಇದಕ್ಕಾಗಿ ದೂರುವ ಅಗತ್ಯವಿಲ್ಲ, ಅಲ್ಲಮ್ಮನ ಪ್ರಕಾರ ಹೊನ್ನು ಹೆಣ್ಣು ಮತ್ತು ಮಣ್ಣು ಕೇವಲ ಸಾಧನಗಳು. ಆದರೆ ಹೆಣ್ಣು ಸಾಧನವೂ ಹೌದು ಮತ್ತು 'ಸಾಧ್ಯ'ವೂ ಹೌದು. ಏಕೆಂದರೆ ಅಲ್ಲಿ ಜೀವವಿದೆ. ಅಲ್ಲಮನು ಹೆಣ್ಣನ್ನು ಒಂದು ಸಾಧನದ ನೆಲೆಗೆ ಇಳಿಸಿಬಿಟ್ಟಿದ್ದಾನೆ. ಹೆಣ್ಣನ್ನು ಆಸ್ತಿ-ಒಡವೆ ಯೆಂದು ಪರಿಗಣಿಸಿಲ್ಲ ಎಂಬ ಉದಾರತನವೊಂದನ್ನು ಬಿಟ್ಟರೆ ಅಲ್ಲಮನಲ್ಲಿಯೂ ಹೆಣ್ಣಿಗೆ ಘನತರವಾದ ಸ್ಥಾನವೇನು ಪ್ರಾಪ್ತವಾಗಿಲ್ಲ.

ಹೆಣ್ಣಿನ ಮೇಲಿನ ಆಸೆಯನ್ನು ತೊರೆಯಬೇಕಾದ ಅಗತ್ಯವನ್ನು ವಚನವು ಹೇಳುತ್ತಿದೆ. ಇಲ್ಲಿ ಹೆಣ್ಣು ಗಂಡಿನ ಸಾಧನೆಗೆ ಇರುವ ಒಂದು ಕಂಟಕ. ಅದನ್ನು ತೊರೆಯಬೇಕು ಎಂಬುದು ಇಲ್ಲಿನ ವಾದ. ಹೊನ್ನು ಮತ್ತು ಮಣ್ಣು ಹೇಗೆ ಮನುಷ್ಯನಲ್ಲಿ ವಿಷಯಾಸಕ್ತಿಯನ್ನು ಕೆರಳಿಸುತ್ತದೆಯೋ ಅದೇ ರೀತಿ ಹೆಣ್ಣು ಸಹ ವಿಷಯಾಸಕ್ತಿಯನ್ನು ಕೆರಳಿಸುವ ಒಂದು ಸಾಧನ. ಆದರೆ ಇಲ್ಲಿ ಗಂಡಿನ ಪಾತ್ರವನ್ನು ವಚನವು ಕಡೆಗಣಿಸಿದೆ.

**ಜೈವಿಕತೆ ವಿರುದ್ಧ ರೆಮ್ಮವ್ವೆಯ ವಿಚಾರ ಪ್ರಣಾಳಿಕೆ**

ಹೆಣ್ಣನ್ನು ಜೈವಿಕತೆಗೆ-ಪ್ರಕೃತಿಗೆ ಸಂವಾದಿಯಾಗಿ ಪರಿಭಾವಿಸಿಕೊಳ್ಳುವ ಪರಿಯನ್ನು ಅತ್ಯಂತ ಉಗ್ರವಾಗಿ ಖಂಡಿಸಿ ರೆಮ್ಮವ್ವೆ ತನ್ನ ವಿಚಾರ ಪ್ರಣಾಳಿಕೆಯನ್ನು ಮಂಡಿಸಿರುವುದನ್ನು ನೋಡಬಹುದಾಗಿದೆ. ಮಹಿಳೆಗೆ ಸಂತಾನೋತ್ಪತ್ತಿ ಜವಾಬುದಾರಿಯನ್ನು ನಿರ್ದಿಷ್ಟಪಡಿಸಿರುವುದರಿಂದಾಗಿ ಅವಳನ್ನು ಪ್ರಕೃತಿಗೆ ಸಂವಾದಿಯನ್ನಾಗಿ ಮಾಡುವ ಪರಿ ರೂಢಿಯಲ್ಲಿದೆ. ಸಂತಾನೋತ್ಪತ್ತಿ ಚಟುವಟಿಕೆಯನ್ನು ಜೈವಿಕವೆಂದು ವರ್ಗೀಕರಿಸಲಾಗಿದೆ. ಇಲ್ಲಿ ನಾವು ಸೂಕ್ಷ್ಮವಾಗಿ

ಗಮನಿಸಬೇಕಾಗಿರುವ ಸಂಗತಿಯೆಂದರೆ ಸಂತಾನೋತ್ಪತ್ತಿಯೆಂಬುದು ಸಂಪೂರ್ಣವಾಗಿ ಜೈವಿಕವಾದುದೇನಲ್ಲ. ಇದರಲ್ಲಿ ಎರಡು ಭಾಗಗಳಿವೆ. ಒಂದು-ಮಕ್ಕಳನ್ನು ಹಡೆಯುವುದು. ಎರಡು-ಮಕ್ಕಳ ಸಂಗೋಪನೆ, ಇವೆರಡರಲ್ಲಿ ಮೊದಲನೆಯದು ಜೈವಿಕ. ಆದರೆ ಸಂಗೋಪನೆಯು ಜೈವಿಕವಾದುದೇನಲ್ಲ ಸಾಮಾಜಿಕ ಸಂತಾನೋತ್ಪತ್ತಿಯೆಂಬುದು ಭಾಗಶಃ ಜೈವಿಕ ಮತ್ತು ಭಾಗಶಃ ಸಾಮಾಜಿಕ. ಮಕ್ಕಳನ್ನು ಹಡೆಯುವುದು ಹೆಣ್ಣಿಗೆ ನಿರ್ದಿಷ್ಟವಾದ ಸಂಗತಿಯಾಗಿರಬಹುದು. ಆದರೆ ಸಂಗೋಪನೆಯು ಲಿಂಗ ನಿರ್ದಿಷ್ಟವಾದುದೇನಲ್ಲ. ಅದರಲ್ಲಿ ಪುರುಷರು ಭಾಗಿಗಳಾಗಬಹುದು. ಸಂತಾನೋತ್ಪತ್ತಿ ದುಡಿಮೆಗೆ ಸಂಬಂಧಿಸಿದಂತೆ ಪುರುಷರು ತಮ್ಮ ಪಾಲನ್ನು ನಿರ್ವಹಿಸಬಹುದು. ಆದರೆ ವಾಸ್ತವದಲ್ಲಿ ಸಂತಾನೋತ್ಪತ್ತಿ ಕಾರ್ಯವನ್ನು ಸಂಪೂರ್ಣವಾಗಿ ಲಿಂಗ ನಿರ್ದಿಷ್ಟವನ್ನಾಗಿ ಮಾಡಿ ಅದನ್ನು ಮಹಿಳೆಯರ ಕೊರಳಿಗೆ ಕಟ್ಟಿಹಾಕಲಾಗಿದೆ. ಈ ಪರಿಯ ಜೈವಿಕ ನಿಯತಿ ವಿಚಾರ ಪ್ರಣಾಳಿಕೆಯನ್ನು ವಿರೋಧಿಸಿ ಕದಿರ ರೆಮ್ಮವ್ವೆಯು ತನ್ನ ಉಗ್ರವಾದ ಲಿಂಗ ಸಂಬಂಧಿ ವಿಚಾರವನ್ನು ತನ್ನ ಒಂದು ವಚನದಲ್ಲಿ ಮಂಡಿಸಿದ್ದಾಳೆ.

**ಎಲ್ಲರ ಹೆಂದಿರು ತೊಳ ಸಿಕ್ಕುವರು**
**ಎನ್ನ ಗಂಡಂಗೆ ತೊಳಸುವುದಿಲ್ಲ**
**ಎಲ್ಲರ ಗಂಡಂದಿರಿಗೆ ಬಸಿವರು**
**ಎನ್ನ ಗಂಡಂಗೆ ಬಸಿಯುವುದಿಲ್ಲ**
**ಎಲ್ಲ ಗಂಡಂದಿರಿಗೆ ಬೀಜವುಂಟು**
**ಎನ್ನ ಗಂಡಂಗೆ ಅಂಡದ ಬೀಜವಿಲ್ಲ**
**ಎಲ್ಲ ಗಂಡಂದಿರು ಮೇಲೆ**
**ಎನ್ನ ಗಂಡ ಕೆಳಗೆ, ನಾ ಮೇಲೆ**
**ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರ**

***(ಕದಿರ ರೆಮ್ಮವ್ವೆ)***

ಮಹಿಳೆಯರ ಬದುಕು ಸಾರ್ಥಕವಾಗುವುದು ಸಂತಾನೋತ್ಪತ್ತಿಯ ಮೂಲಕ ಎಂಬ ವಿಚಾರವು ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿದೆ. ಸಂತಾನೋತ್ಪತ್ತಿಯಿಲ್ಲದೆ ಮಹಿಳೆಯು ಮಹಿಳೆಯೆನಿಸಿಕೊಳ್ಳುವುದಿಲ್ಲ ಎಂದು ನಂಬಲಾಗಿದೆ. ಮಹಿಳೆ ಮತ್ತು ಸಂತಾನೋತ್ಪತ್ತಿಗಳ ನಡುವೆ ಇಂತಹ ಜೈವಿಕ-ಸಾವಯವ ಸಂಬಂಧವನ್ನು ನಿರ್ಮಿಸಲಾಗಿದೆ. ಈ ಬಗೆಯ ಜೈವಿಕ ನಿಯತಿಯ ಸಂಗತಿಯನ್ನು ರೆಮ್ಮವ್ವೆಯು ಕಟುವಾಗಿ ಟೀಕಿಸುತ್ತಿದ್ದಾಳೆ. ಅವಳ ಪ್ರಕಾರ ಸಂತಾನೋತ್ಪತ್ತಿ ಜವಾಬುದಾರಿಯನ್ನು ನಿರ್ವಹಿಸದೆಯೂ ಹೆಣ್ಣು ತನ್ನ ಬದುಕನ್ನು ಸಾರ್ಥಕಪಡಿಸಿಕೊಳ್ಳಬಹುದು. ಈ ವಚನದಲ್ಲಿ 'ಅಂಡದ ಬೀಜ'ವೆನ್ನುವುದು ಸಂತಾನೋತ್ಪತ್ತಿಯನ್ನು ಸಂಕೇತಿಸುವ ನುಡಿಯಾಗಿದೆ. ಸಂತಾನವನ್ನು ಹೆಣ್ಣಿನಲ್ಲಿ ಬಿತ್ತುವ ಕೆಲಸವನ್ನು ಗಂಡು ಮಾಡುತ್ತಾನೆ. ಸಂತಾನೋತ್ಪತ್ತಿಗೆ ಮೂಲ 'ಬೀಜ'. ಆದ್ದರಿಂದ ರೆಮ್ಮವ್ವೆಯು 'ಅಂಡದ ಬೀಜ'ವನ್ನೇ ಅಲ್ಲಗಳೆಯುತ್ತಿದ್ದಾಳೆ. ಹೀಗೆ ಅಂಡದ ಬೀಜವನ್ನು ಅಲ್ಲಗಳೆಯುವುದರ ಮೂಲಕ ಮಹಿಳೆಗೆ ಅಂಟಿಕೊಂಡಿರುವ ಸಂತಾನೋತ್ಪತ್ತಿಯ ಸಂಕೋಲೆಯನ್ನು ರೆಮ್ಮವ್ವೆಯು ಕಿತ್ತುಹಾಕಲು ಪ್ರಯತ್ನಿಸುತ್ತಿದ್ದಾಳೆ. ಸಂತಾನೋತ್ಪತ್ತಿಯ ಜವಾಬುದಾರಿ ಯನ್ನು ನಿರ್ವಹಿಸಿದೆಯೂ ಹೆಣ್ಣು ತನ್ನ ಜೀವನವನ್ನು ಸಾರ್ಥಕ್ಯ ಪಡಿಸಿಕೊಳ್ಳಬಹುದು. ಅದು ಗಂಡಿಗೆ ಸಾಧ್ಯವಾಗಬಹುದಾದರೆ ಹೆಣ್ಣಿಗೂ ಸಾಧ್ಯವಾಗಬೇಕು. ಇಲ್ಲಿ ರೆಮ್ಮವ್ವೆಯು ಲಿಂಗ ಸಂಬಂಧಗಳ ಜೈವಿಕ ನಿಯತಿಯ ನೆಲೆಯನ್ನು ಕಿತ್ತೊಗೆಯಲು ಪ್ರಯತ್ನಿಸುತ್ತಿದ್ದಾಳೆ. ಗಂಡಿನ ಶ್ರೇಷ್ಠತೆಯನ್ನು ಅಲ್ಲಗಳೆದು ರೆಮ್ಮವ್ವೆಯು ಹೆಣ್ಣಿನ ಜೇಷ್ಠತೆಯನ್ನು ಸ್ಥಾಪಿಸಲು ಇಲ್ಲಿ ಪ್ರಯತ್ನಿಸುತ್ತಿದ್ದಾಳೆ. ಎಲ್ಲರ ಗಂಡಂದಿರು 'ಮೇಲೆ'. ಆದರೆ ರೆಮ್ಮವ್ವೆಯ ಗಂಡ ಮಾತ್ರ 'ಕೆಳಗೆ'. ಅವಳು ಮೇಲೆ. ಲಿಂಗ ಸಂಬಂಧಿ ಏಣಿ ಶ್ರೇಣಿಯನ್ನು ತಲೆಕೆಳಗು ಮಾಡುವ ರಾಜಕಾರಣ ಇಲ್ಲಿದೆ. ಲಿಂಗ ಸಂಬಂಧಗಳನ್ನು ಜೈವಿಕ ನೆಲೆಗೆ ಪ್ರತಿಯಾಗಿ ಸಾಮಾಜಿಕ ನೆಲೆಯಲ್ಲಿ ಕಟ್ಟಿಕೊಳ್ಳುವ ಪ್ರಯತ್ನ ಇಲ್ಲಿ ನಡೆದಿದ್ದೆ.

**ಸೂತಕದ ಸಂಕೋಲೆಗಳು**

ಲಿಂಗ ಸಂಬಂಧಿ ತಾರತಮ್ಯಗಳನ್ನು ಪೋಷಿಸುತ್ತಿರುವ ಪುರುಷಶಾಹಿಯು ಅನೇಕ ಜೈವಿಕ ಸಂಗತಿಗಳನ್ನು ಸೂತಕವೆಂದು ಪರಿಗಣಿಸಿ ಮಹಿಳೆಯರನ್ನು ಸಮಾಜದಲ್ಲಿ ಅಂಚಿಗೆ ದೂಡಿರುವ ಸಂಗತಿಯನ್ನು ನೋಡಬಹುದಾಗಿದೆ. ಸೂತಕಗಳು ಐದು. ಈ ಐದರಲ್ಲಿ ಎರಡು-ಅಂದರೆ ಜನನ ಮತ್ತು ರಜಸ್ಸೂತಕಗಳು ಮಹಿಳೆಗೆ ಸಂಬಂಧಿಸಿವೆ. ಜೀವವೊಂದಕ್ಕೆ ಜನ್ಮ ನೀಡುವ ಕ್ರಿಯೆಯನ್ನು ಮತ್ತು ಋತುಚಕ್ರ ಸಂಬಂಧಿ ಬದಲಾವಣೆಯನ್ನು 'ಹೊಲೆ' - 'ಸೂತಕ'ವೆಂದು ಪರಿಗಣಿಸಿ ಮಹಿಳೆಯರನ್ನು ಕನಿಷ್ಠರೆಂದು - ಕೀಳೆಂದು ವರ್ಗೀಕರಿಸಲಾಗಿದೆ. ಜೈವಿಕ ಸಂಗತಿಗಳು ಇಲ್ಲಿ ಸೂತಕಗಳಾಗಿಬಿಟ್ಟಿವೆ. ಆದರೆ ಜೈವಿಕ ಸಂಗತಿಗಳು ತಮ್ಮಷ್ಟಕ್ಕೆ ತಾವು ಸೂತಕಗಳಲ್ಲ. ಸೂತಕಗಳು ಸಾಮಾಜಿಕವಾಗಿ ಕಟ್ಟಿರುವ ಅನಿಷ್ಟಗಳಾಗಿವೆ.

ಸೂತಕವೆನ್ನುವುದು - ಹೊಲೆತನವೆನ್ನುವುದು ಸಾಮಾಜಿಕವಾಗಿ ಕಟ್ಟಿಕೊಂಡ ಸಂಗತಿಗಳು-ಅವು ಜೈವಿಕ ಸಂಗತಿಗಳಲ್ಲ ಎಂಬುದನ್ನು ಅಕ್ಕಮಹಾದೇವಿಯು ತನ್ನ ಒಂದು ವಚನದಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾಳೆ. ಈ ವಚನದಲ್ಲಿ ಮಹಾದೇವಿಯು ಸೂತಕದ ಜೈವಿಕ ನೆಲೆಯನ್ನು ಮುರಿದು ಅದರ ಸಾಮಾಜಿಕ ನೆಲೆಯನ್ನು ಗುರುತಿಸುವುದರ ಜೊತೆಗೆ ಅತ್ಯಂತ ತರ್ಕಬದ್ಧವಾಗಿ ಸೂತಕ ಸಂಕಥನವನ್ನು ಅವಳು

ತಿರಸ್ಕರಿಸುತ್ತಿದ್ದಾಳೆ. ಸಾಂಪ್ರದಾಯಿಕವಾಗಿ ಹೆಣ್ಣನ್ನು ಸೂತಕವೆಂದು-ಭವಿಯೆಂದು ಪರಿಗಣಿಸುತ್ತಾ ಬರಲಾಗಿದೆ. ಆದರೆ ಅಕ್ಕ ಇದನ್ನು ಒಪ್ಪುವುದಿಲ್ಲ.

**ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ**
**ಗಂಡು ಗಂಡಾದಡೆ ಹೆಣ್ಣಿನ ಸೂತಕ**
**ಮನದ ಸೂತಕ ಹಿಂಗಿದಡೆ**
**ತನುವಿನ ಸೂತಕಕ್ಕೆ ತೆರಹುಂಟೆ?**
**ಅಯ್ಯಾ ಮೊದಲಿಲ್ಲದ ಸೂತಕಕ್ಕೆ ಮರುಳಾಗಿತ್ತು ಜಗವೆಲ್ಲ!**
**ಎನ್ನ ದೇವ ಚೆನ್ನಮಲ್ಲಿಕಾರ್ಜುನನೆಂಬ ಗರುವಂಗೆ**
**ಜಗವೆಲ್ಲ ಹೆಣ್ಣು ನೋಡಾ ಅಯ್ಯಾ**

*(ಅಕ್ಕಮಹಾದೇವಿ)*

ಅಕ್ಕಮಹಾದೇವಿಯ ಪ್ರಕಾರ ಇಡೀ ಜಗತ್ತೇ 'ಹೆಣ್ಣು' ಎಂದಾದರೆ ಯಾವುದು ಸೂತಕ -ಯಾವುದು ಪವಿತ್ರ! ಆಕೆಯ ಪ್ರಕಾರ ಸೂತಕವೆನ್ನುವುದು ಇಲ್ಲ. ಅದೊಂದು ಚಾರಿತ್ರಿಕ ಉಪಾಧಿ, ಸಾಮಾಜಿಕವಾಗಿ ಕಟ್ಟಿಕೊಂಡ ಒಂದು ಅನಿಷ್ಟ ಸೂತಕ. ಅದು ಸಾಮಾಜಿಕ ಸಂಗತಿಯೇ ವಿನಾ ಜೈವಿಕ ಸಂಗತಿಯಲ್ಲ.

ಒಟ್ಟಂದದಲ್ಲಿ ಜಾತಿ ಸಂಬಂಧಿ ಹಾಗೂ ಲಿಂಗ ಸಂಬಂಧಿ ಜೈವಿಕ ನಿಯತಿಯ ನೆಲೆಗಳನ್ನು ವಚನಕಾರರು ತಿರಸ್ಕರಿಸಿದ್ದಾರೆ. ಶ್ರೇಷ್ಠ-ಕನಿಷ್ಟ, ಗಂಡು-ಹೆಣ್ಣು, ಪ್ರಕೃತಿ-ಸಂಸ್ಕೃತಿ ಎನ್ನುವ ಸಂಗತಿಗಳೆಲ್ಲ ಸಮಾಜವು ಕಟ್ಟಿಕೊಂಡ ಉಪಾಧಿಗಳು. ತಾರತಮ್ಯವಾದಿ ಜೈವಿಕ ನಿಯತಿಯನ್ನು ತಿರಸ್ಕರಿಸಿದ ವಚನ ಸಂಸ್ಕೃತಿಯು ಸಮಾನತೆ ಆಧಾರದ ಮೇಲೆ ಬದುಕನ್ನು ಕಟ್ಟಲು ಪ್ರಯತ್ನಿಸಿತು. ಜೈವಿಕ ನಿಯತಿಯಲ್ಲಿ ಸಮಾನತೆ ಸಾಧ್ಯವಿಲ್ಲ. ಅಸಮಾನತೆ-ಜಾತಿ ಸಂಬಂಧಿಯಾಗಿರಲಿ ಅಥವಾ ಲಿಂಗ ಸಂಬಂಧಿಯಾಗಿರಲಿ - ಅದು ಸಾಮಾಜಿಕ ಅನಿಷ್ಟ, ಅದನ್ನು ಮನುಷ್ಯ ಪ್ರಯತ್ನದ ಮೂಲಕ ನಿವಾರಿಸಿಕೊಳ್ಳಬಹುದು. ಜೈವಿಕ ನಿಯತಿಯು 'ಪ್ರಾರಬ್ಧ'ಕ್ಕೆ ಮನ್ನಣೆ ನೀಡಿದರೆ ಸಾಮಾಜಿಕತೆಯು 'ಪ್ರಯತ್ನ'ಕ್ಕೆ ಮನ್ನಣೆ ನೀಡುತ್ತದೆ. ಪ್ರಾರಬ್ಧಕ್ಕಿಂತ ಪ್ರಯತ್ನವೇ ಮಿಗಿಲು. ಜೈವಿಕ ನಿಯತಿಯ ಚಾರಿತ್ರಿಕ ನೆಲೆಯನ್ನು ಗುರುತಿಸುವುದರಲ್ಲಿ ವಚನಕಾರರು ಯಶಸ್ವಿಯಾದರು. ಈ ಕಾರಣದಿಂದಾಗಿ ವಚನಕಾರರಿಗೆ ಜೈವಿಕ ನಿಯತಿಯನ್ನು ತಿರಸ್ಕರಿಸುವುದು ಸಾಧ್ಯವಾಯಿತು. ಅತ್ಯಂತ ಪ್ರಜ್ಞಾಪೂರ್ವಕವಾಗಿ ವಚನಕಾರರು ಅಸಮಾನತೆಯನ್ನು, ಏಣಿ ಶ್ರೇಣಿಯನ್ನು ಅಂತರ್ಗತ ಮಾಡಿಕೊಂಡ ಜೈವಿಕ ನಿಯತಿ ಸೂತ್ರವನ್ನು ಮುರಿಯಲು ಪ್ರಯತ್ನಿಸಿದರು. ಲಿಂಗ ಸಂಬಂಧಗಳನ್ನು ಸಾಮಾಜಿಕ ನೆಲೆಯಿಂದ ಪರಿಭಾವಿಸಿಕೊಳ್ಳಬೇಕು ಎಂಬ ಇಂದಿನ ತುರ್ತಿಗೆ ವಚನಕಾರರ ವಿಚಾರಗಳು ನಮಗೆ ನೆರವಾಗುತ್ತವೆ.

○ *ಟಿ. ಆರ್. ಚಂದ್ರಶೇಖರ*
ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ,

*"ಕುಮಾರಿ ಅಲ್ಟಗ್ರೇಸಿಯ, ಹೊಲಿಗೆ ಮಾಡುವವಳಾಗಿದ್ದಳು. ದಿನವೊಂದಕ್ಕೆ 5.75 ಡಾಲರುಗಳನ್ನು ಸಂಪಾದಿಸತೊಡಗಿದ್ದಳು. ಇದು 'ತುಂಡು ಕೆಲಸ'ಕ್ಕೆ ಮೀಸಲಾದ ಮೊತ್ತಕ್ಕಿಂತ ಹೆಚ್ಚಾಗಿತ್ತು" ಅವಳ ಕಾರ್ಖಾನೆಯ ಮೇಲ್ವಿಚಾರಕ ಕ್ಯೂಬಾದಿಂದ ವಲಸೆ ಬಂದವನಾಗಿದ್ದ. ಅವನು ಇವಳನ್ನು ತನ್ನ ಕಛೇರಿಗೆ ಕರೆಸಿದ. ಅಲ್ಟಗ್ರೇಸಿಯ ಹೇಳಿದಳು : "ನಾನು ಚೆನ್ನಾಗಿ ಕೆಲಸ ಮಾಡುತ್ತಿದ್ದೇನೆಂದು ಹೇಳಿದ. ಆದರೆ ನಾನು ಮತ್ತು ಇನ್ನು ಕೆಲವು ಮಹಿಳೆಯರು ಅತಿ ಹೆಚ್ಚು ಸಂಪಾದಿಸುತ್ತಿದ್ದೇವೆ. ಆದಕಾರಣ ನಾವು ಹೊಲಿಯುವ ಪ್ರತಿಯೊಂದು ತುಂಡಿಗೂ ಕೊಡುವ ಹಣವನ್ನು ಕಡಿಮೆ ಮಾಡಲು ಅವನ ಮೇಲೆ ಒತ್ತಡ ಬಂದಿದೆ ಎಂದು ತಿಳಿಸಿದ." ಈಗವಳು ಅತ್ಯಂತ ಹೆಚ್ಚು ದುಡಿದ ದಿನಗಳಲ್ಲಿ ಅವಳ ದುಡಿಮೆಗೆ ಕೂಲಿ ಕೇವಲ 3 ಡಾಲರುಗಳು ಮಾತ್ರ. ಅವಳು ಹೇಳಿದಳು : ನಾನು ಕಡಿಮೆ ಸಂಪಾದಿಸುತ್ತಿದ್ದೆ. ಅದಕ್ಕಾಗಿ ವಾರದಲ್ಲಿ ಆರರಿಂದ ಏಳು ದಿನಗಳು ದುಡಿಯಲಾರಂಭಿಸಿದೆ. ಆದರೆ ನಾನು ದಣಿದಿದ್ದೆ. ನನಗೆ ಮೊದಲಿನಂತೆ ಬೇಗನೆ ಕೆಲಸ ಮಾಡಲು ಆಗುತ್ತಿರಲಿಲ್ಲ. ಕೆಲವೇ ತಿಂಗಳುಗಳಲ್ಲಿ ಅವಳು ದುಡಿಯಲಾಗದಷ್ಟು ರೋಗಗ್ರಸ್ಥಳಾದಳು.*

*(Michael Flannery : America's sweatshops in the sun : AFLCIO American Federationist : May, 1978 : p. 14)*

*ಸುಮಾರು 2 ದಶಲಕ್ಷ ಮಕ್ಕಳು ಪ್ರತಿವರ್ಷ ಲೈಂಗಿಕ ದುರ್ಬಳಕೆ ಮತ್ತು ಅಪಹರಣಕ್ಕೊಳಗಾಗುತ್ತಾರೆ. ಲೈಂಗಿಕ ಶೋಷಣೆಗಾಗಿ ಮಕ್ಕಳ ಅಪಹರಣ ಪ್ರಮಾಣ ದಕ್ಷಿಣ ಏಷ್ಯಾ ಮತ್ತು ದಕ್ಷಿಣ ಪೂರ್ವ ಏಷ್ಯಾದಲ್ಲಿ ಅತ್ಯಂತ ಹೆಚ್ಚು.*

*'ಸಿಚ್ಯುಯೇಷನ್ ರಿಪೋರ್ಟ್' ಇಂಡಿಯಾ 1998*

ECPAT *(ಎಂಡ್ ಚೈಲ್ಡ್ ಪ್ರಾಸ್ಟಿಟ್ಯೂಷನ್ ಇನ್ ಏಷ್ಯಾ ಟೂರಿಸಂ) ಪ್ರಕಾರ, ಈ ಪ್ರದೇಶದ ವೇಶ್ಯಾವಾಟಿಕೆಗಳಲ್ಲಿ 16 ವರ್ಷಕ್ಕಿಂತ ಕಡಿಮೆ ವಯಸ್ಸಿನ ಒಂದು ದಶಲಕ್ಷದಷ್ಟು ಮಕ್ಕಳು ಇರುವ ಸಾಧ್ಯತೆಯಿದೆ.*

*-ಇಂಟರ್ ಪ್ರೆಸ್ ಸರ್ವೀಸ್, ಜುಲೈ 10, 1998*

# 'ದಂಡೆ': ಸ್ತ್ರೀಯರ ಸಂಕಥನ

**ಕಾ.**ತ. ಚಿಕ್ಕಣ್ಣನವರ 'ದಂಡೆ' ಕಾದಂಬರಿ ಗ್ರಾಮ ಮಹಿಳೆಯರ ಜೀವನದರ್ಶನವನ್ನು ಎಳೆಎಳೆಯಾಗಿ ಬಿಚ್ಚಿಡುತ್ತದೆ. ಈ ಕಾದಂಬರಿಯ ಪ್ರಧಾನ ಪಾತ್ರವಾದ ಅವ್ವಯ್ಯನ ಜೀವನದ ವಿವರಗಳನ್ನು ಒಂದಿರುಳಿನ ಸ್ಮರಣಾನುಭವ ರೂಪದಲ್ಲಿ ಹಿಡಿದಿಡುವ ತಂತ್ರ ಓದುಗರ ಮನಸ್ಸನ್ನು ಹಿಡಿದಿಡುತ್ತದೆ. ಈ ಕಾದಂಬರಿ ಸಮಕಾಲೀನ ಮಹಿಳೆಯರ ತಹತಹಿಕೆ, ಬದುಕಿನ ರೀತಿ, ಪ್ರಶ್ನೆ ಎಲ್ಲವನ್ನು ಮನತಟ್ಟುವಂತೆ ಕಟ್ಟಿಕೊಡುತ್ತದೆ. ಮಹಿಳೆಯರ ಜೀವನದ ಒಳವಿವರಗಳನ್ನು ಶೋಧಿಸುವ, ಹುಡುಕಾಟ ನಡೆಸುವ ಕಥನವಾಗಿದೆ. ಅವ್ವಯ್ಯ ಜೀವನದುದ್ದಕ್ಕೂ ಆಸರೆಗಾಗಿ, ಪ್ರೀತಿಗಾಗಿ, ನೆಮ್ಮದಿಗಾಗಿ ಹುಡುಕಾಟ ನಡೆಸುತ್ತಲೇ ಪರಂಪರೆಯು ಕಟ್ಟಿಕೊಡುವ ಮಹಿಳೆಯು ಪುರುಷನ ಅವಲಂಬಿತಳೆಂಬ ನಂಬಿಕೆಯನ್ನು ಶೋಧಕ್ಕೊಳಪಡಿಸುತ್ತದೆ. "ನೋಡಪ್ಪಾ ನಾನು ಹೆಣ್ಣು ಕನೊ; ಆಗ ಅಪ್ಪನ್‌ಗೆ ಮಗ್‌ಳಾಗಿ ಅವ್‌ನ ನೆಳ್ಳಾದೆ. ಆಮ್ಯಾಲೆ ಗಂಡನ್‌ಗೆ ಹೆಂಡ್ರಾಗಿ ಆಡಕ್ಕೆ ಚೆಂಡಾದೆ. ಅತ್ತೆ ಮಾವುರ್‌ಗೆ ಸೊಸೆಯಾಗಿ ಗಾಣದ ಎತ್ತಾದೆ. ಈಗ ಮಗನ್‌ಗೆ ಅವ್ವನಾಗಿ ಊರ್‌ಗೋಲಾಗಿ ಇವ್‌ನಿ. ಹಿಂಗಿದ್‌ರೂ ಉದ್‌ಕೂ ಬಂದುಲ್ಲಿಗಿಡದಂಗೆ ಬಾಳಬೇಕಾಯ್ತು ನೋಡು" (ಪು. 116) ಮಗನ ಮುಂದೆ ಅವ್ವಯ್ಯ ಸತ್ಯವನ್ನು ಶೋಧಿಸುವ ಸಲುವಾಗಿಯೇ ಪರಂಪರೆಯನ್ನು ಪ್ರಶ್ನಿಸುತ್ತಾಳೆ. ಸಂವಾದಕ್ಕೆ ಎಳೆಯುತ್ತಾಳೆ. ವ್ಯವಸ್ಥೆಯ ನಂಬಿಕೆಯನ್ನು ವಿಡಂಬಿಸುವುದೇ ಅದರ ತಾತ್ವಿಕತೆಯಾಗಿದೆ.

ಹೆಣ್ಣು ಅವಲಂಬಿತಳಾಗುವುದರಿಂದ ಆಕೆ ಇತರರ ಆಶ್ರಯದಲ್ಲಿ ಆಸರೆ ಪಡೆಯುವವಳಂತೆ ವ್ಯವಸ್ಥೆ ಬಿಂಬಿಸುತ್ತದೆ. ಆದರೆ ಅವ್ವಯ್ಯ ತಾನೇ ಇತರರನ್ನು ರಕ್ಷಿಸುವ ಮೂಲಕ ತಾನೇ ಆಸರೆಯಾಗುತ್ತಾಳೆ. ತಾಯಿಯ ಬದುಕಲ್ಲಿ ಮಗನಾಗಿ ಮಾನಸಿಕ ಆಸರೆಯಾದರೆ; ಮುಪ್ಪಿನಲ್ಲಿದ್ದ ಅತ್ತೆ ಮಾವನಿಗೆ ಮಗ ಮಾಡಬೇಕಾದ ಕರ್ತವ್ಯಗಳನ್ನು ತಾನೇ ನಿರ್ವಹಿಸುವ ಮೂಲಕ ಎಲ್ಲ ರೀತಿಯಲ್ಲೂ ಆಸರೆಯಾಗುತ್ತಾಳೆ. ಮಗನಿಗೆ ತಂದೆ-ತಾಯಿ ಎರಡು ಆಗಿ ಪ್ರೀತಿಯನ್ನು ನೀಡುತ್ತಾ ಗಂಡ ನಿರ್ವಹಿಸಬೇಕಾದ ಕರ್ತವ್ಯಗಳನ್ನು ತಾನೇ ನಿರ್ವಹಿಸುತ್ತಾ ಒಂಟಿಯಾಗಿ ಜೀವನಕ್ಕೆ ಮುಖಾಮುಖಿಯಾಗುತ್ತಾ ಸಾಗುತ್ತಾಳೆ. ಪರಂಪರೆಯ ನಂಬಿಕೆಯ ಒಳಗೆ ಬದುಕಿನ ಜೀವಂತಿಕೆ ಕುಳಿತಿರುವುದಲ್ಲವೆಂಬ ಸತ್ಯವನ್ನು ಕಾದಂಬರಿ ಶೋಧಿಸುತ್ತದೆ.

ಹೆಣ್ಣಿಗೆ ಸ್ವಂತ ವ್ಯಕ್ತಿತ್ವವೊಂದು ಇರುತ್ತದೆಯೇ? ಎಂಬ ಪ್ರಶ್ನೆಯನ್ನು ಇಟ್ಟುಕೊಂಡು ಹೊರಡುವ ಕಾದಂಬರಿಕಾರರು ಅವ್ವಯ್ಯನಲ್ಲಿ ಪ್ರಶ್ನೆಗಳನ್ನು ರೂಪಿಸುತ್ತಾ ಸಾಗುತ್ತಾರೆ. ಇದು ಈ ಕಾದಂಬರಿಯ ತಂತ್ರವಾಗಿಯೇ ರೂಪುಗೊಂಡಿದೆ. ಆಸರೆಯಲ್ಲಿ ಇರಬೇಕಾದ ಹೆಣ್ಣು ಮಗಳು ಕುಟುಂಬವೆಂಬ ಸಮಾಜಕ್ಕೆ ತಾನೇ ಆಸರೆಯಾಗಿದ್ದುಕೊಂಡು ಎಲ್ಲ ರೀತಿಯ ಜವಾಬ್ದಾರಿಗಳನ್ನು ಹೊರಬೇಕಾಗಿದೆ ಎಂಬ ವಸ್ತು ಸ್ಥಿತಿಯನ್ನು ತೆರೆದಿಡುತ್ತಾರೆ. ಸಮಾಜದ ನಿಯಮಗಳು ಒಂದನ್ನು ಸಾರುತ್ತಿದ್ದರೆ ವಾಸ್ತವದ ಬದುಕು ಮತ್ತೊಂದು ರೂಪದಲ್ಲಿ ಇರುವುದನ್ನು ತಿಳಿಸುತ್ತದೆ. ಇದಕ್ಕೆ ಅವ್ವಯ್ಯನ ಬದುಕು ಮಾತ್ರವೇ ಸಾಕ್ಷಿಯಾಗುವುದಿಲ್ಲ. ಈ ಕಾದಂಬರಿಯ ಪ್ರತಿಯೊಂದು ಮಹಿಳಾ ಪಾತ್ರಗಳ ಜೀವನ ಕ್ರಮವೇ ಅದಾಗಿರುವುದನ್ನು ಕಾದಂಬರಿ ಕಟ್ಟಿಕೊಡುತ್ತದೆ.

ಅವ್ವಯ್ಯನ ತಾಯಿಯಾದ ದೊಡ್ಡಿ ಒಂದು ವಿಶಿಷ್ಟ ಪಾತ್ರವಾಗಿ ಮೂಡಿ ಬಂದಿದೆ. ಸಮಾಜ ನಿರ್ಧರಿಸುವ ಮೌಲ್ಯಗಳ ತದ್ವಿರುದ್ಧದ ಸ್ವಭಾವದವಳಾಗಿ ಕಾಣುತ್ತಾಳೆ. ತಂದೆಯು ಇದಕ್ಕೆ ಹೊರತಲ್ಲ. ಆದರೆ ಹೊಣೆಗಾರಿಕೆಯಲ್ಲಿ ರೂಢಿಗಿಂತ ಭಿನ್ನವಾಗಿ ಆತನ ಸ್ವಭಾವವೇನು ರೂಪಗೊಳ್ಳುವುದಿಲ್ಲ. ಘನಲಿಂಗನಿಂದ ತನ್ನ ಮಗಳನ್ನು ರಕ್ಷಿಸಲು ಅಸಾಧ್ಯವೆನಿಸಿದಾಗ ಅವನಿಗೇ ಕೊಟ್ಟು ಮದುವೆ ಮಾಡುವ ಯೋಚನೆ ಮಾಡುತ್ತಾನೆ. ಹೆಂಡತಿ ಇದಕ್ಕೆ ಒಪ್ಪುವುದಿಲ್ಲ. ಆಗ ಆತ ತನ್ನ ಹೆಂಡತಿಯನ್ನು ನಿಯಂತ್ರಿಸುವ ವ್ಯಕ್ತಿಯಾಗಿ ರೂಪುಗೊಳ್ಳುತ್ತಾನೆ. "ದೊಡ್ಡಿ ಆ ಕಡೆ ಹೊಳ್ಳಿ ಮಲಗಿದ್ದ ಮಗಳ ಕಡೆ ನೋಡಿದ್ದಳು. ಸಮಸಮ ಹೊತ್ತು ಮೀರಿತ್ತು. ಗಂಡು ಮಗನಂಗೆ ಓಡಾಡಿಕೊಂಡು ನಿಸೂರಾಗಿದ್ದ ಈ ಮಗಳು ದೊಡ್ಡವಳಾದ ಮೇಲೆ, ನಾಕು ವರುಷದಿಂದ ಹೊಸ್ತಿಲ ದಾಟಿ ಆಚೆ ಹೋಗಿಲ್ಲ. ಇವಳಪ್ಪ ಬುಟ್ಟಿಲ್ಲ. ಹೆಣ್ಣು ನೆರೆದ ಮೇಲೆ ಪರ ಗಂಡಸಿನ ನೆರಳು ಬೀಳಬಾರದು ಅನ್ನೋ ನೀತಿ ಅವುಂದು. ಎರಡು ಕಾಗೆ ಕೂಡೋದನ್ನು ನೋಡಬಾರದು ಅನ್ನೋ ಕಟ್ಟುಬಲುಮೆ ಅವುಂದು; ಆ ಹಾಳು ಹಠಕ್ಕೆ ನುಗ್ಗೇಕಾಯಾದೋಳು ಮಗಳು" (ಪು. 31) ಬಾಲ್ಯಾವಸ್ಥೆಯಲ್ಲಿ ತಾಯಿಯ ಪ್ರೇಮ ಪ್ರೀತಿಗಳಿಂದ ಸ್ವತಂತ್ರವಾಗಿ ಕಳೆದ ಅವ್ವಯ್ಯ ಪ್ರೌಢಾವಸ್ಥೆಗೆ ಬಂದ ತಕ್ಷಣ ತಂದೆಯ ನಿರ್ಬಂಧಗಳಿಂದಾಗಿ ತನ್ನ ಚಲನೆಯನ್ನೇ ಕಳೆದುಕೊಳ್ಳುತ್ತಾಳೆ. ಓದುವ ಆಸೆಗೆ ಕಲ್ಲು ಬಿದ್ದು ತಾಯಿಯ ಒತ್ತಾಸೆಯಾಗಿ ಬೆಳೆದ ಅವ್ವಯ್ಯ ಗಂಡು ಮಗುವಿನಂತೆ ಬೆಳೆದವಳು. ಇದಕ್ಕೆ ತಾಯಿಯ ಬಲವಿರುತ್ತದೆ. ಮಾತು ಮಾತಿಗೂ ಗಂಡು ಮಗುವಿಲ್ಲದ

ಕೊರತೆಯನ್ನು ಅವ್ವಯ್ಯನ ತಾಯಿ ಮಗಳ ಮೂಲಕ ತುಂಬಿಕೊಳ್ಳುತ್ತಾ ಬದುಕು ಸಾಗಿಸುತ್ತಾಳೆ. ತಾಯಿಯ ಶ್ರೀರಕ್ಷೆ ತಂದೆಯ ನಿಯಮಗಳಲ್ಲಿ ಬಹಳ ದಿನ ಉಳಿಯುವುದಿಲ್ಲ. ಬಹಳಷ್ಟು ಶ್ರಮದಿಂದ ಮನೆಯನ್ನು ನಿಭಾಯಿಸಿಕೊಂಡು ಬಂದಿದ್ದ ದೊಡ್ಡವ್ವಳ ಮಾತು ಕೊನೆಗೆ ನಿರ್ಲಕ್ಷ್ಯವಾಗುತ್ತದೆ. ಸ್ವಲ್ಪ ಮಟ್ಟಿಗಾದರೂ ತಂದೆಯ ಬಿಸಿ ಆಕೆಗೆ ಕಡಿಮೆಯಾದದ್ದು ತಾಯಿಯಿಂದಲೇ. ಆದರೂ ಅವ್ವಯ್ಯನ ಸ್ಥಿತಿಯನ್ನು ಲೇಖಕರು ಹೀಗೆ ನಿರೂಪಿಸುತ್ತಾರೆ :

ಅವನ ಕೇಳದೆ ಕೆಮ್ಮುವಂತಿಲ್ಲ
ಅವನು ಹೂ ಅನ್ನದೆ ನಗುವಂತಿಲ್ಲ
ಅವನ ಸನ್ನೆ ಇಲ್ಲದೆ ಕತ್ತೆತ್ತುವಂತಿಲ್ಲ
ಅವನು ಹೇಳದೆ ಮಲಗುವಂತಿಲ್ಲ
ಅವನಿಗೆ ತಿಳಿಸದೆ ಮೈನೀರು ಹುಯ್ಯುವಂತಿಲ್ಲ

ಈಕೆಯ ಪ್ರತಿ ಚಲನವಲನಗಳ ಮೇಲೆ ತಂದೆ ಕಣ್ಣಿರಿಸುತ್ತಾನೆ. ಇಂಥ ಉಸಿರು ಸಡಿಲಗೊಳಿಸಲಾಗದ ಸ್ಥಿತಿಯಲ್ಲಿ ಸಹಜ ಹಂಬಲಗಳಿರುವ ಅವ್ವಯ್ಯನ ಜೀವನ ತನ್ನ ಜೀವನ ಸಂಗಾತಿಯ ಶೋಧದಲ್ಲಿ ತೊಡಗುತ್ತದೆ. ಅವಳ ಶೋಧಕ್ಕೆ ದಕ್ಕಿದ ಯುವಕನನ್ನು ಕುರಿತು ಕನಸು ಕಾಣುತ್ತಿರುವಾಗಲೇ ಅಥವಾ ಈಕೆ ಕಟ್ಟಿಕೊಂಡ ದಂಡೆಯನ್ನು (ದಂಡೆ ಎಂದರೆ ಬಿಡಿ ಬಿಡಿಯಾದ ಹೂಗಳನ್ನು ಪೋಣಿಸಿ ಮಾಡಿದ ದುಂಡಾದ ಹೂವಿನ ಮಾಲೆ) ಘನಲಿಂಗನು ನುಚ್ಚುನೂರಾಗಿಸುತ್ತಾನೆ. ಹೆಣ್ಣೆಂದರೆ ಬಳಸಲ್ಪಡುವವಳೆಂಬ ಸಾಮಾಜಿಕ ಮನಸ್ಥಿತಿಯೊಂದಿದೆ. ಈ ಅರ್ಥದಲ್ಲಿ ಹೆಣ್ಣನ್ನು ಬಲಾತ್ಕಾರದಿಂದ ಪಡೆಯುವುದು ಗಂಡಿನ ಹಕ್ಕು ಎಂಬ ಮನಸ್ಥಿತಿ ರೂಪುತಳೆದಿದೆ. ಚರಿತ್ರೆಯ ಪುಟಗಳು ಕೂಡ ಇದನ್ನೇ ದಾಖಲಿಸುತ್ತವೆ. ಪುರಾಣ ಕಾವ್ಯಗಳಲ್ಲಂತೂ ಇದರ ವರ್ಣನೆಗಳು ವೈಭವದಿಂದ ಕೂಡಿವೆ. ಸೀತೆಯ ಅಪಹರಣ, ದ್ರೌಪದಿ ವಸ್ತ್ರ ಸೆಳೆಯುವಿಕೆ, ಕೀಚಕನ ಕುಚೇಷ್ಟೆ, ಒಂದೇ ಎರಡೆ. ಇಂತಹ ಭವ್ಯ ಇತಿಹಾಸವೇ ಪುರುಷನಿಗೆ ಹೆಣ್ಣನ್ನು ಕೆಣಕುವ ಹಕ್ಕನ್ನು ನೀಡಿದೆ. ಇದು ಇಂದಿಗೂ ಮಹಿಳೆಯ ಸಂದರ್ಭದಲ್ಲಿ ನಡೆಯುತ್ತಲೇ ಇದೆ. ಪಿತೃಪ್ರಧಾನತೆಯ ಕ್ರೌರ್ಯದ ಪರಾಕಾಷ್ಠೆಯೇ ಇದಾಗಿದೆ. ಮಹಿಳೆ ಎಂದ ತಕ್ಷಣ ದೇಹವನ್ನು ಮಾತ್ರ ಪರಿಗಣಿಸುವುದರಿಂದ ಘನಲಿಂಗನಂಥ ವ್ಯಕ್ತಿಗಳು ಎಲ್ಲಿದ್ದರೂ ಅವರ ವಿರುದ್ಧ ವ್ಯವಸ್ಥೆ ಇರುವುದಿಲ್ಲ; ಬದಲಾಗಿ ಆ ವ್ಯವಸ್ಥೆ ನಿರಪರಾಧಿಯಾದ ಸ್ತ್ರೀಯರ ವಿರುದ್ಧವಾಗಿರುತ್ತದೆ. ಈ ಅರ್ಥದಲ್ಲಿ ಹೆಣ್ಣಿನ ಭಾವನೆಗಳು ಕೂಡ ಕನಸುಗಳಂತೆ ಕೈಗೆ ಬರುವುದಿಲ್ಲ. ಸ್ಮೃತಿಯಲ್ಲಿ ನಿಂತುಬಿಡುತ್ತವೆ. ಅವ್ವಯ್ಯನ ಸ್ಮೃತಿಯು ಬಿಚ್ಚಿಕೊಂಡಾಗ ಆಕೆಯ ಜೀವನದಲ್ಲಿ ಪಡೆದದ್ದೇನೆಂದು ಚಿಂತಿಸುತ್ತಾ ಸಾಗುವ ಪಯಣ ಮಾತ್ರವೇ ಕಾಣುತ್ತದೆ. ಆಕೆ ತನ್ನ ಬಯಕೆಗಳನ್ನು ಹುಡುಕುತ್ತಾ ಹೊರಡುವ ಪಯಣ ಒಂದಾದರೆ, ಸ್ಮೃತಿಯ ಪಯಣದ ಹಾದಿ ಇನ್ನೊಂದೆಡೆ. ಹೀಗೆ ಕಾದಂಬರಿ ಏಕಕಾಲದಲ್ಲಿ ಎರಡನ್ನು ಬಹಳ ಸೂಕ್ಷ್ಮವಾಗಿ ಹಾಗೂ ಕಲಾತ್ಮಕವಾಗಿ ನೇಯ್ಯುತ್ತಾ ಸಾಗುತ್ತದೆ. ಕಾದಂಬರಿ ಕಪ್ಪು ಬಿಳುಪಾಗುವ ಅಪಾಯದಿಂದ ಪಾರಾಗಿ ಕಲೆಯಾಗಿ ರೂಪು ಪಡೆದಿದೆ.

ಬಯಸಿದ ಚೆಲುವರಾಜನನ್ನು ಪಡೆಯಲಾರದ ಅವ್ವಯ್ಯ, ಮದುವೆಯ ಅನಂತರದಲ್ಲೂ ಆತನ ನೆನಪನ್ನು ಮಾಡಿಕೊಳ್ಳುತ್ತಾ ಉತ್ಸಾಹಿಯಾಗುತ್ತಾಳೆ. ಗಂಡನ ನೆನಪು ದುಗುಡ ದುಮ್ಮಾನಗಳನ್ನು ತಂದು ದೇಹ, ಮನಸ್ಸನ್ನು ಭಾರ ಮಾಡಿದರೆ; ಚೆಲುವರಾಜನ ನೆನಪು ಉಲ್ಲಾಸ, ಉತ್ಸಾಹ ಹಾಗೂ ಲಗುಬಗೆಯನ್ನು ನೀಡುತ್ತದೆ. ವಾಸ್ತವ ಮತ್ತು ಸ್ಮೃತಿಯ ನಡುವಿನ ಅಂತರವನ್ನು ಈ ಎರಡೂ ನೆಲೆಯಲ್ಲಿ ಕಾದಂಬರಿ ಕಟ್ಟಿಕೊಡುತ್ತದೆ. ದಕ್ಕದ ಚೆಲುವರಾಜ ಕನಸು, ಸ್ಮೃತಿಯಾಗಿ ಆಹ್ಲಾದಕರ ಅನುಭವವಾದರೆ; ಅನುಭವಗಳನ್ನು ನೀಡಿ ಅವಳನ್ನು ತಣಿಸಿದ ರಾಯಣ್ಣ ದೂರವಾಗಿ; ಈತನ ನೆನಪು ಅವಳಿಗೆ ಎದೆ ಭಾರವಾಗಿಸುತ್ತದೆ. ದುಃಖದ ಸ್ಮೃತಿಯಾಗಿ ಬಿಡುತ್ತದೆ.

ಆ ಚೆಲುವರಾಜುನಂಥ ಗಂಡು ಕುಲವೇ ಎದೆ ಗುಂಡಿಗೆ ಯೊಳಗಿನ ಗುಡುಗು ಮಿಂಚಾಗಿ ಬುಟ್ಟಿತ್ತಲ್ಲ (ಪು. 104).

ಆದರೆ ದಿಟವಾಗಿ
ಈ ಗಂಡು ಕುಲದ ರಾಮಣ್ಣ
ತನ್ನ ಗಂಡ
ಆ ಹೆಣ್ಣಿನ ಕಣ್ಣೀರಿನ ಒಳಗಿದ್ದ
ಜೀವದಾಸೆಯ ಕುದಿತವ ಕಾಣದೆ ಹೋದ (ಪು. 106)

ಇನ್ನೂ ಮುಂದುವರಿಸಿದ ಲೇಖಕರು ಮತ್ತಷ್ಟು ವಿಸ್ತಾರ ವಾಗಿ ಅವ್ವಯ್ಯನ ಆ ಇಬ್ಬರ ನಡುವಿನ ಸ್ಮೃತಿಗಳನ್ನು ಹೆಣೆಯುತ್ತಾರೆ.

ಗಂಡನ ಆಸೇಲಿ
ಗಂಡನ ನಿರೀಕ್ಷೇಲಿ
ಗಂಡನ ಅತೃಪ್ತೀಲಿ
ಕಳೆದದ್ದೆಲ್ಲ ಬರೀ ಆತಂಕದ, ತಲ್ಲಣದ ಚಣಗೋಳು
ಏಟು ದಿವಸ?
ಏಟು ಮಾಸ?
ಏಟು ವರುಷಗೋಳು?
ಗಂಡ
ನೋವಿಂದ ಮರಗಟ್ಟಿದ ದಿಟವಾದ ಬದುಕಾದ

ಆದರೆ ನಡು ನಡುವೆ ತಿಳಿಗಾಳಿಯಾಗಿ ಬತ್ತಿದ್ದೋನು
ಚೆಲುವರಾಜ
ಆಗ,
ಕರಾಳ ನಾಳೆಗೋಳಿಗಿಂತ ಕಳೆದ ದಿವಸಗೋಳೇ ಹಿತ
ಚೆಲುವರಾಜ ಆ ದಿವಸಗೊಳ ಮಧುರ ರೂಪ
ಅವನು-
ಉದುರಿ ಚೆಲ್ಲಿದ ಹುವ್ವ ಹಾಸರದ ಮೇಲೆ
ದುಂಬಿ ದಂಡಿನ ಸೋಬಾನೆ ಗುಂಗು ಹರಿಸಿದೋನು;
ಹಸರು ಹಸಲೆಯ ಎಸಳುಗೊಳ ಮೇಲೆ
ಮುಂಜಾನೆ ಇಬ್ಬನಿಗಟ್ಟಿದ ಮುತ್ತುಗೊಳ
ರಾಶಿ ಕಟ್ಟಿ ಕಂಗೊಳಿಸಿದೋನು
ಅವನು-
ಕೆರೆಯ ಏರಿಗಪ್ಪಳಿಸೊ ಅಲೆಯ ಮೇಲೆ
ಮುಳುಗದೆ ಬರೊ ಹುವ್ವಿನ ದಂಡೆ;

ಮುಗ್ಧತೆಯ ಮೂರ್ತಿಯಾದ ಚೆಲುವರಾಜ ಅವ್ವಯ್ಯನ ಚಲನೆಯನ್ನು ನಡೆಸುವವನಾಗಿ ಕಾದಂಬರಿಯಲ್ಲಿ ಕಂಡುಬರುತ್ತಾನೆ. ರಾಯಣ್ಣ ಪುರುಷ ಪ್ರಧಾನ ಆಶಯಗಳ ಒಳಗೆ ಹೆಣ್ಣನ್ನು ಶಕ್ತಿಸ್ವರೂಪಿಯಾಗಿ, ಮಾತೃಸ್ವರೂಪಿಯಾಗಿ ಆರಾಧಿಸುತ್ತಾ ಆಕೆಯ ಸ್ವಂತ ಉಸಿರಾಟವನ್ನು ನಿಯಂತ್ರಿಸುತ್ತಾ ಸರ್ವರನ್ನೂ ಸಲುಹುವ ಹೆಣ್ಣನ್ನು ಕಟ್ಟಿಕೊಡುವ ಸಮಾಜದ ಒಪ್ಪಿತ ಮಾದರಿಯನ್ನು ಸ್ಥಿರೀಕರಿಸುವ ಪಾತ್ರವಾಗಿ ವಿಕಾಸವಾಗಿರುವುದನ್ನು ಕಾಣುತ್ತೇವೆ. ಕಾದಂಬರಿಯಲ್ಲಿ ಕೆರೆಗೆ ಹಾರವಾಗುವ ಹೆಣ್ಣಿನ ಕುಲವನ್ನು ಆರಾಧಿಸುವುದು ರಾಷ್ಟ್ರೀಯ ಹೋರಾಟದಲ್ಲಿ ಬಲಿಯಾಗುವ ಹುತಾತ್ಮ ಕಲ್ಪನೆಯನ್ನು ಹೋಲುತ್ತದೆ.

ಮಾಸ್ತಿ, ಕುವೆಂಪು ಮುಂತಾದ ನವೋದಯ ಕವಿಗಳು ಕೂಡ ಈ ಬಲಿದಾನವನ್ನು ಶ್ರೇಷ್ಠವೆಂದೇ ಹೊಗಳಿ ಹಾಡುವುದನ್ನು ಕಾಣಬಹುದು. ಆದರೆ ಬಲಿಯಾಗುವ ವ್ಯಕ್ತಿಯ ತುಮುಲಗಳ ಕಡೆ ಈ ಚರ್ಚೆ ಸಾಗುವುದೇ ಇಲ್ಲದ್ದನ್ನು ಅವ್ವಯ್ಯನ ಪಾತ್ರದಲ್ಲಿ ಲೇಖಕರು ತರವುದು ಹೀಗೆ : "ಕೆರೆಗೆ ಹಾರವಾದ ಆ ಸೊಸೆ ಒಂದೊಂದು ಮೆಟ್ಟಿಲನ್ನು ಹತ್ತುವಾಗಲೂ ಮುಂದಿನ ಮೆಟ್ಟಿಲಿಗೆ ತ್ರಾಸ ಪಡುತಾ, ಕಳೆದುದ್ದಕ್ಕೆ ಹುರುಪು ತುಂಬಿ ಕೊಳ್ಳುತಾ ಏರಿದಳಲ್ಲವಾ? ಹೆಜ್ಜೆ ಹೆಜ್ಜೆಗೂ ಮಾವ, ಅತ್ತೆ, ಅಪ್ಪ, ಅವ್ವಂದಿರಿಂದ ಸಿಕ್ಕಿದ ನಿರುತ್ಸಾಹವೆಲ್ಲ ಮೆಟ್ಟಿ, ಮೇಲೇರಲು ಪಡಿಪಾಟಲು ಪಟ್ಟಳಲ್ಲವಾ? ಮಾವನ ಆ ಕೀರುತಿ ಶನಿ ಇಂಗೋಗಿ ತನ್ನ ಬದುಕೊವಾಸೆಗೇ ಜಯ ಸಿಗಬಾರದೇಕೆಂಬ ತುಡಿತ ಪ್ರತಿ ಮೆಟ್ಟಿಲು ಹತ್ತುವಾಗಲೂ ಉಸಿರು ಹಿಡಿದಿಟ್ಟಿತ್ತಲ್ಲವಾ? ಆದರೆ ಹೆಣ್ಣಿನ ತುಡಿತವೆಲ್ಲ ಈ ಗಂಡಿನ ಸ್ಥಾನಬಲದ ನಿಶೇಲಿ ಹರಿಯೊ ನೀರ ಮೇಲಣ ಗುಳ್ಳೆಯಾಯ್ತಲ್ಲ....." ಪಿತೃಪ್ರಧಾನ ಸಮಾಜವು ಹೆಣ್ಣಿನಲ್ಲಿ ತ್ಯಾಗ, ಸಹನೆ, ಅರ್ಪಣೆ ಮುಂತಾದ ಗುಣಗಳನ್ನು ನಿರೀಕ್ಷಿಸುತ್ತದೆ. ಇಂಥ ಮೌಲ್ಯಗಳನ್ನು ಒಪ್ಪಿ ಜೀವನ ಸಾಗಿಸುವ ಹೆಣ್ಣು ಮಾತ್ರ ಸಮಾಜದಲ್ಲಿ ಮಾನ್ಯಳಾಗುತ್ತಾಳೆ. ಇದನ್ನು ಮುಂಟೇಸ್ವಾಮಿ ಬೀರಪ್ಪನಂಥ ಮುಗ್ಧರ ಮಾತುಗಳಲ್ಲದೆ ಅವ್ವಯ್ಯನ ಮಗ ಗುರುರಾಜನಂಥ ವಿದ್ಯಾವಂತ ಯುವಕನು ಸಮರ್ಥಿಸುವುದನ್ನು ಕಾಣುತ್ತೇವೆ. ಅವ್ವಯ್ಯನು ಆಕೆಯ ಗಂಡನನ್ನು ದೇಶ ರಕ್ಷಣೆಗೆ ಕಳುಹಿಸಿ ಮಾಡಿದ ತ್ಯಾಗವೇ ದೊಡ್ಡದು ಎಂದು ಹೇಳುವ ಮೂಲಕ ಹೆಣ್ಣಿನ ವೈಯಕ್ತಿಕ ನೋವು ನಲಿವುಗಳಿಗಿಂತ ಸಮುದಾಯದ ಕಾರ್ಯದಲ್ಲಿ ತೊಡಗುವುದು ಶ್ರೇಷ್ಠ ಎಂದು ಅರ್ಥೈಸುವುದು ಕಾಣುತ್ತೇವೆ. ವೀರತ್ವ ಪುರುಷನ ಗುಣವೆಂದು ಸಮಾಜ ನಿರೀಕ್ಷಿಸುವಂತೆ ಪಾಲನೆ, ಪೋಷಣೆ, ರಕ್ಷಣೆ ಮಾಡುವುದು ಹೆಣ್ಣಿನ ಕೆಲಸವೆಂದು ತೀರ್ಮಾನಿಸುತ್ತದೆ. ಅವ್ವಯ್ಯನ ಗಂಡ ರಾಯಣ್ಣನ ಅನುಪಸ್ಥಿತಿಯಲ್ಲಿ ಅವ್ವಯ್ಯ ತನ್ನ ದೇಹದ ಮೇಲೆ ಹಿಡಿತ ಸಾಧಿಸಿ ರಾಯಣ್ಣನ ಮನೆಯನ್ನು ಗಂಡಿನಂತೆ ಸಂಬಾಳಿಸಿದ್ದು ಎಲ್ಲರಿಗೂ ಆಕೆಯ ಮೇಲೆ ಗೌರವ ಮೂಡಿಸುವಂತೆ ಮಾಡಿರುತ್ತದೆ. ಆದರೆ ಅವ್ವಯ್ಯ ತನ್ನ ಸ್ವಂತ ಇಚ್ಛೆಯನ್ನು ಪ್ರಕಟಿಸುವುದನ್ನು ತಿರಸ್ಕರಿಸುತ್ತದೆ. ವ್ಯವಸ್ಥೆ ತೋರುವ ನಿರ್ಲಕ್ಷ್ಯಕ್ಕೆ ಅವ್ವಯ್ಯನಲ್ಲಿ ಹುಟ್ಟುವ ಅನೇಕ ಪ್ರಶ್ನೆಗಳಿಗೆ ಉತ್ತರ ದೊರೆಯದೆ ನಿಟ್ಟುಸುರು ಬಿಡುತ್ತಾಳೆ.

"ಈ ಮಗ ಹೇಳುತ್ತಿರೋದಾದರೂ ಏನು? ಇವನಿಗೆ ತನ್ನ ಅವ್ವ ಎಂಥ ಬಾಳು ಉಂಡಿದ್ದಾಳೆ ಅನ್ನೋ ಬಗ್ಗೆ ಕಿಂಚಿತ್ತು ನಿಗಾ ಇಲ್ಲ. ಒಂಟಿತನದ ಕೌರ್ಯ ಹಿಂಸೆಯ ಪಾಡು ಬೇಕಿಲ್ಲ. ತನ್ನ ಅಪ್ಪ ಸತ್ತದ್ದು ಹೆಮ್ಮೆ ಅಂತ ಹೇಳ್ತಾನೆ. ಸತ್ತ ಗಂಡನ ಧರ್ಮಪತ್ನಿಯಾಗಿ ಅಂಥ ಸಾವಿಗೆ ಬೀಗೋ ಮಗನ ಆದರ್ಶ ತಾಯಿಯಾಗಿ ತಾನು ಪಾಲಾಡಬೇಕು; ಎಂಥ ಪುಣ್ಯಾತ್ಗಿತ್ತಿ ತಾನು?

ಹೀಗೆ ಅವ್ವಯ್ಯ ತನ್ನ ಬದುಕಿನ ಆಯಾಮಗಳನ್ನು ಶೋಧಿಸಿಕೊಳ್ಳುತ್ತಾ ಸಾಗುತ್ತಾಳೆ. ಬೆಂಬಲಕ್ಕೆ ಮಗನು ನಿಲ್ಲುವುದಿಲ್ಲವೆಂಬ ಸತ್ಯವನ್ನು ಅರಿತುಕೊಂಡ ಅವ್ವಯ್ಯ ಮುಂದೆ ಬದಲಾಗಬೇಕಾದ ಸ್ತ್ರೀಯರ ಜೀವನಕ್ರಮಕ್ಕಾಗಿ ಚಿಂತಿಸುವಳು. "ಬತ್ತಿ ಕೆಳ ಸರಿಯೋದು, ಉರಿ ಸಣ್ಣದಾಗೋದು, ತಿರುಗಿ ಅದನ್ನು ಮೇಲೆತ್ತುವಳು. ಅದು ಕೆಳ ಸರಿಯೋದು" ಈ ಮಾತುಗಳು ಸ್ತ್ರೀ ಜೀವನಕ್ಕೆ ಹಿಡಿದ ಕನ್ನಡಿಯಾಗಿದೆ. ಅವಳ ಆಸೆಗಳು, ಬಯಕೆಗಳು, ಜೀವ ತುಂಬಿಕೊಂಡು ಮೇಲೇರುವಾಗಲೇ ಅವು ಉರಿದು ಕೆಳಗೆ ಬೀಳುವ ಸನ್ನಿವೇಶಗಳು ಹಲವು. ಅವ್ವಯ್ಯನ ಬದುಕು ಇಂತಹ

ಏರುಪೇರುಗಳಲ್ಲೇ ಸಾಗುತ್ತದೆ. ಚೆಲುವರಾಜನಿಂದ ರಾಯಣ್ಣನಿಗೆ, ರಾಯಣ್ಣನಿಂದ ಗುರುರಾಜನಲ್ಲಿ ಅವ್ವಯ್ಯ ಕಟ್ಟಿಕೊಂಡ ಬದುಕಿನ ದಂಡೆಯು ವ್ಯವಸ್ಥೆಯಲ್ಲಿನ ನಿಯಮಗಳಿಗೆ ಬತ್ತಿ ಸೊರಗುತ್ತದೆ. ಆದರೆ ಅವ್ವಯ್ಯ ತನ್ನ ಕನಸುಗಳನ್ನು ಪೋಣಿಸಿ ದಂಡೆ ಮಾಡದೆ ಬಿಡುವವಳಲ್ಲ. ನಿರಂತರವಾಗಿ ಕಟ್ಟುವ ಕ್ರಿಯೆಯಲ್ಲಿ ಕ್ರಿಯಾತ್ಮಕವಾಗಿ ಹೋರಾಟ ನಡೆಸುವ ಅವ್ವಯ್ಯ ಈ ಕಾಲದಲ್ಲಿನ ಮಹಿಳಾ ಹೋರಾಟದ ದಿಕ್ಕುಗಳನ್ನು ಅದರ ಸ್ಥಿತಿಯನ್ನು ಪ್ರತಿನಿಧಿಸುವ ಜೀವಿಯಾಗಿ ಕಂಡುಬರುತ್ತಾಳೆ.

ಮಹಿಳೆಯ ನಿಟ್ಟುಸಿರನ್ನು ಪದೇ ಪದೇ ಹೇಳುವಾಗಲೂ ಸಹ ಅವಳ ತೊಳಲಾಟಕ್ಕೆ ಸ್ಪಂದಿಸದ ಮತ್ತೊಂದು ವರ್ಗ, ಸಮಾಜವನ್ನು ತನ್ನದಾಗಿಸಿಕೊಂಡಿದೆ. ಆಕೆಯು ವರ್ತಮಾನವನ್ನು ತನ್ನೊಂದಿಗೆ ವಿವೇಚಿಸುತ್ತಾ ಹೊರಡುವಂತೆ, ಭೂತವನ್ನು ತನ್ನ ತಾಯಿ ಮತ್ತು ಬೇಲೂರಿಯ ಮೂಲಕ, ಭವಿಷ್ಯವನ್ನು ಸೀತೆ, ಗಿರಿಜೆಯರ ಮೂಲಕ ಕಟ್ಟಿಕೊಳ್ಳುತ್ತಾಳೆ. ಭೂತದಲ್ಲಿ ಹೆಣ್ಣಿನ ಸ್ಥಿತಿ ಸಾಂಪ್ರದಾಯಿಕವಾಗಿದ್ದರು ಹೆಣ್ಣು ತನಗೆ ಬೇಕಾದಂತೆ ಜೀವಿಸುವ ಶಕ್ತಿಯನ್ನು ಪಡೆದುಕೊಂಡ ರೀತಿ ದೊಡ್ಡಿ, ಬೇಲೂರಿಯ ಜೀವನಕ್ರಮದಲ್ಲಿ ಮೂಡಿಬಂದಿದೆ. ವರ್ತಮಾನದಲ್ಲಿ ವ್ಯವಸ್ಥೆಯ ಪ್ರಧಾನ ಆಶಯಗಳನ್ನೇ ಪ್ರಶ್ನಿಸುತ್ತಾ ಕಳೆದುಕೊಂಡ ಬದುಕಿನ ತಹತಹಿಕೆಯನ್ನು, ಹೆಣ್ಣಿನ ಸ್ವಂತ ಬದುಕಿನ ಶೋಧವನ್ನು ಅವ್ವಯ್ಯನ ಜೀವನಕ್ರಮದಲ್ಲಿ ಕಾಣುತ್ತೇವೆ. ಗಿರಿಜೆ, ಸೀತೆಯರು ತಮಗೆ ಬೇಕಾದದ್ದನ್ನು ಆಯ್ಕೆ ಮಾಡಿಕೊಂಡವರು. ಹೊಸ ಮೌಲ್ಯಗಳ ಕಡೆ ತಮ್ಮನ್ನು ವಿಸ್ತರಿಸಿಕೊಂಡವರಾಗಿ ಮೂಡಿಬಂದಿದ್ದಾರೆ. ಹೀಗೆ ಕಾಲದ ಪರಿವರ್ತನೆಯನ್ನು ಹಿಡಿದಿಡುತ್ತಾ ಎಲ್ಲಿಯೂ ಕಾದಂಬರಿ ತನ್ನ ಬಿಗಿಯನ್ನು ಕಳೆದುಕೊಳ್ಳದೆ ಕಲಾತ್ಮಕವಾಗಿ ಮೂಡಿಬಂದಿದೆ.

ಅವ್ವಯ್ಯ ಸೀತೆಗೆ ಹೇಳುವ ಮಾತುಗಳಲ್ಲಿಯೇ ವ್ಯವಸ್ಥೆಯ ಪರಿವರ್ತನೆಯಾಗಬೇಕೆಂಬ ಒತ್ತಾಸೆಯ ಜೊತೆಗೆ ಹೆಣ್ಣಿನ ಜೀವನದಲ್ಲಿ ಒಳ್ಳೆಯ ದಿನಗಳು ಭವಿಷ್ಯದಲ್ಲಿ ರೂಪು ಪಡೆಯುತ್ತವೆಂಬ ನಂಬಿಕೆ ಕಾದಂಬರಿಯ ಕೇಂದ್ರ ಶಕ್ತಿಯಾಗಿದೆ. "ಆ ಹೊತ್ತೇರಿದಂಗೆ ಈ ಜೀವ ಏರಿ ಬೆಳಿಬೇಕು. ಹಂಗೆ ಬೆಳಿಯೋ ಬಾಗ್ಲು ತೆಗಿ ನನ್ನವ್ವ. ಆ ತ್ರಾಣ ಪ್ರಾಣ ಎಲ್ಲ ನಿನ್ನಲ್ಲೆ ಅದೆ" ಹೀಗೆ ಪರಿವರ್ತನೆಯನ್ನು ಮೂಡಿಸುವ ಶಕ್ತಿ ಹೆಣ್ಣಿನ ಸ್ವಶಕ್ತಿಯಾಗಿದೆ ಎಂಬುದನ್ನು ಕಾದಂಬರಿ ಎತ್ತಿಹಿಡಿಯುತ್ತದೆ. ಪರಿವರ್ತನೆಯ ಆಕಾಂಕ್ಷೆಯನ್ನು ಸೆರೆಹಿಡಿಯುತ್ತಲೇ ಹೆಣ್ಣಿನ ಭೂತ, ವರ್ತಮಾನಗಳ ಸ್ಥಿತಿಯನ್ನು ಬಿಂಬಿಸುತ್ತದೆ.

'ದಂಡೆ' ಕಾದಂಬರಿಯ ಭಾಷೆ ಕಾವ್ಯಾತ್ಮಕವಾಗಿದೆ. ಆದರೆ ಭಾಷೆಯಲ್ಲಿ ಗಂಡಿನ ಆಲೋಚನಾ ಕ್ರಮ ಪ್ರವೇಶಿಸಿ ಸ್ತ್ರೀಯಾತ್ಮಕವಾದ ಪ್ರತಿಮೆಗಳನ್ನು ಹಿಡಿದಿಡುವುದಕ್ಕಿಂತ ಭಿನ್ನವಾಗಿದೆ. ಇದನ್ನು ಪುರುಷ ಭಾಷೆಯೆನ್ನಬಹುದು. ಸ್ತ್ರೀಯ ಬದುಕಿನ ವಿವರಗಳನ್ನು ಹೇಳುವಾಗ ಈ ಭಾಷೆ ಭಿನ್ನವಾಗಿದ್ದರೆ ಇದರ ವೈಶಿಷ್ಟ್ಯ ಮತ್ತಷ್ಟು ಹೆಚ್ಚುತ್ತಿತ್ತು.

'ದಂಡೆ' ಕಾದಂಬರಿಯ ಶೀರ್ಷಿಕೆ ಇಲ್ಲಿ ಎರಡು ರೀತಿಯ ಆಯಾಮಗಳನ್ನು ಪಡೆದುಕೊಂಡಿದೆ. ಒಂದು 'ಅರಾಸಿನಲ್ಲಿರುವ' ಹೆಣ್ಣಿನ ಬದುಕು ಪುರುಷ ಪ್ರಧಾನ ಮೌಲ್ಯ ವ್ಯವಸ್ಥೆಯಲ್ಲಿ ಪ್ರಧಾನತೆಯನ್ನು ಪಡೆದುಕೊಳ್ಳದೆ ಅಂಚಿಗೆ ಸರಿಸಲ್ಪಟ್ಟಿದೆ ಎನ್ನುವುದನ್ನು ತಿಳಿಸುತ್ತದೆ. 'ದಂಡೆ' ನೀರಿಗೆ ರಕ್ಷಣೆಯಾಗಿ ಆವರಿಸಿಕೊಂಡು ಅನಂತರದಲ್ಲಿ ಜೀವರಾಶಿಗಳಿಗೆ ಪಸೆಯನ್ನು ನೀಡಿ ರಕ್ಷಿಸುವ ಜೀವದಾತೆಯಾಗಿದೆ. ಇಂಥ ಜೀವ ಕಟ್ಟುವ ದೆಸೆಯಲ್ಲಿ ಅನುಭವಗಳು, ಕನಸುಗಳು, ನೆನಪುಗಳನ್ನು ಪೋಣಿಸುತ್ತಾ ಸಾಗಿದಂತೆ ದಂಡೆಯಾಕಾರವಾಗಿ ರೂಪು ಪಡೆಯುತ್ತದೆ. ದಂಡೆಯು ಸಾಧ್ಯತೆಗಳನ್ನು ಮುಖಾಮುಖಿಯಾಗಿಸುತ್ತಾ ಸಮಾಜವನ್ನು ಶೋಧಿಸುತ್ತಾ ಹೊರಡುತ್ತದೆ. ಶೋಧ ನಿತ್ಯ ಚಲನಶೀಲವಾದದ್ದು, ಸತ್ಯದ ಕಡೆ ಕರೆದೊಯ್ಯುವಂತಹದು ಎಂಬುದನ್ನು ತಿಳಿಸುತ್ತದೆ. ಕಾದಂಬರಿಯಲ್ಲಿ ಬಳಸಿಕೊಳ್ಳಲಾದ ವಚನಗಳು, ತ್ರಿಪದಿಗಳು ಕಾದಂಬರಿಯ ಚಲನೆಯನ್ನು ಶಕ್ತಿಯುತಗೊಳಿಸಿವೆ.

*"ನಮಗೆ ಮಹಿಳಾ ಕಾರ್ಮಿಕರ ಅಗತ್ಯವಿದೆ. ಅವರು 17 ವರ್ಷಕ್ಕಿಂತ ಹೆಚ್ಚು 30 ವರ್ಷಕ್ಕಿಂತ ಕಡಿಮೆ ವಯಸ್ಸಿನವರಾಗಿರಬೇಕು; ಅವಿವಾಹಿತರು ಮತ್ತು ಮಕ್ಕಳಿಲ್ಲದವರಾಗಿರಬೇಕು; ಕನಿಷ್ಠ ಎಂದರೆ ಪ್ರಾಥಮಿಕ ಶಿಕ್ಷಣ, ಗರಿಷ್ಠ ಎಂದರೆ ಪ್ರೌಢಶಾಲೆಯಲ್ಲಿ ಒಂದು ವರ್ಷದ ಶಿಕ್ಷಣವನ್ನು ಪಡೆದಿರಬೇಕು. ಎಲ್ಲಾ ಸರದಿಗಳ ದುಡಿಮೆಗೆ ಸಿದ್ಧರಿರಬೇಕು."*

**- ಮೆಕ್ಸಿಕೊ ಪತ್ರಿಕೆಯೊಂದರ ಜಾಹಿರಾತು**

(ಆಧಾರ : 'Women in the Global Factory'
by Annette Fuentes & Barbara Ehrenreich

## ಎಲ್ಲಿಯವರೆಗೆ ಸಮಾನತೆ !

ಒಂದು ದಿನ ನಮ್ಮ ಕಛೇರಿಯಲ್ಲಿ ನನ್ನ ಸಹೋದ್ಯೋಗಿ ಒಬ್ಬರು ಮತ್ತೊಬ್ಬ ಸಹೋದ್ಯೋಗಿ ಜೊತೆಯಲ್ಲಿ ಮಾತನಾಡುತ್ತಾ ಇರುವಾಗ ಅವರಿಬ್ಬರ ನಡುವೆ ಹೆಣ್ಣಿನ ವಿಷಯ ಶುರುವಾಯಿತು. ಅದರಲ್ಲೂ ಕೆಲಸಕ್ಕೆ ಹೋಗುವ ಹೆಣ್ಣುಮಕ್ಕಳ ಬಗ್ಗೆ ಅದರಲ್ಲಿ ಒಬ್ಬರು ಹೀಗೆ ಹೇಳುತ್ತಿದ್ದರು. ಕೆಲಸಕ್ಕೆ ಹೋಗುವ ಹೆಣ್ಣುಮಕ್ಕಳು ಗಂಡನಿಗೆ ಮರ್ಯಾದೆ ಕೊಡುವುದಿಲ್ಲವೆಂದು ಅದಕ್ಕೆ ಮತ್ತೊಬ್ಬರು ಹೇಳುತ್ತಿದ್ದರು, ಹಾಗೆ ಹೇಳಬೇಡಿ ಸಾರ್ ಯಾಕೆ ಕೊಡುವುದಿಲ್ಲ, ಅದೆಲ್ಲಾ ಅವರವರ ಹೊಂದಾಣಿಕೆ ಮೇಲೆ ಹೋಗುತ್ತದೆ. ಕೆಲವರು ಇದ್ದಾರೆ. ಹಣ ಸಿಕ್ಕಿದ ಕೂಡ್ಲೆ ಬದಲಾಗುವಂಥವರು. ಹಾಗಂತ ಎಲ್ಲರೂ ಅಲ್ಲ. ನೋಡೀ ಇಷ್ಟಲ್ಲಿ ಮಾತಾಡ್ತೀವಿ, ನಾನೇ ಒಂದು ಘಟನೆ ಹೇಳುತ್ತೀನಿ, ಎಂದು ಅವರು ಹೀಗೆ ಹೇಳತೊಡಗಿದರು.

ಒಂದು ಸಲ ಗಂಡು ಹೆಣ್ಣಿನ ಸಮಾನತೆಯ ಬಗ್ಗೆ ಒಂದು ಸೆಮಿನಾರ್ ಆಯ್ತುಂತೆ. ಯಾವ ಜಾಗ ಗೊತ್ತಿಲ್ಲ, ಅದಕ್ಕೆ ಗಂಡ, ಹೆಂಡತಿಯರು ಇಬ್ಬರು ಹೋದರಂತೆ. ಇಬ್ಬರೂ ವಿದ್ಯಾವಂತರು, ಇಬ್ಬರೂ ಕೆಲಸಕ್ಕೆ ಹೋಗುವವರು. ಆ ಸೆಮಿನಾರ್ ಬೆಳಿಗ್ಗೆ 10 ಗಂಟೆಗೆ ಶುರುವಾದದ್ದು ಮುಗಿಯುವಾಗ ಕತ್ತಲೆಯಾಯಿತು. ಅನಂತರ ಇಬ್ಬರೂ ಸುಸ್ತಾಗಿ ಮನೆಗೆ ಬಂದರಂತೆ. ಆತನ ಪತ್ನಿಗೆ ಚಿಂತೆ. ಅಡುಗೆ ಮಾಡಬೇಕಲ್ಲ. ಅವರು ಕೈಕಾಲು ತೊಳೆದು ಬರುವಷ್ಟರಲ್ಲಿ ಗಂಡ ತಾನು ಸುಖಾಸೀನದಲ್ಲಿ ಪವಡಿಸಿ ಹೆಂಡತಿಗೆ 'I am, tired get me a cup of strong coffee yar' ಎಂದು ನಗುನಗುತ್ತಲೇ ಹೇಳಿದನಂತೆ. ಅಂದರೆ, ನೋಡಿ ಇಲ್ಲಿ ಆಕೆಯು ಬೆಳಗ್ಗಿನಿಂದ ಆತನ ಜೊತೆಯಲ್ಲೆ ಸೆಮಿನಾರ್‌ನಲ್ಲಿ ಭಾಗವಹಿಸಿ ತಾನು ಮನೆಗೆ ಸುಸ್ತಾಗಿ ಬಂದಿದ್ದಳು. ಇದೂ ನಮ್ಮ ಸಮಾನತೆಯ ಪರಂಪರೆ. ಎಲ್ಲಿಯವರೆಗೆ ಹೆಣ್ಣು ಸ್ವತಂತ್ರಳು ಅಂದರೆ ಸಮಾನತೆಯ ಸೆಮಿನಾರ್‌ಗಳು, ಅಥವಾ ಭಾಷಣಗಳನ್ನು ಮಾಡುವ ತನಕ ಅಂತ ಮಾತ್ರ ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಇರುವ ಪುರುಷರು ಇರುವ ತನಕ ಹೆಣ್ಣಿಗೆ ಸಮಾನತೆಯಿಲ್ಲ! ಹೆಣ್ಣಿನ ಸಮಾನ ವೇದಿಕೆಯಲ್ಲಿ ಮಾತ್ರ ಅಂತ ತಿಳಿದಿರುವ ಇಂಥ ಗಂಡಸರಿಗೆ ಸಮಾನತೆಯ ಅರಿವು ಮೂಡುವುದು ಸ್ವಪ್ನಲೋಕದಲ್ಲಿ ಮಾತ್ರ ಅನ್ನಿಸುತ್ತದೆ.

● ಹೆಚ್. ಎಸ್. ಪುಷ್ಪ

## ನಗಣ್ಯರು

ನಗಣ್ಯರು ಇವರು ನಗಣ್ಯರು
ರೂಪ ಯೌವನವಷ್ಟೆ
ತುಂಬಬಹುದು ಕಣ್ಣ
ಪ್ರತಿಭೆ ಅಂತಃಸತ್ವದ ಅರಿವು
ಯಾರಿಗೆ ಬೇಕಣ್ಣ?

ಹೊತ್ತು ಹೊತ್ತಿಗೆ ತುತ್ತು ವಸ್ತ್ರವನೊದಗಿಸಿ
ಹೊತ್ತು ಹೆತ್ತುಕೊಟ್ಟರೆ ಸಾಕು ಒಂದೆರಡು ಮಕ್ಕಳ
ಅದೂ ಗಂಡಾದರೆ ಒಂದಿಷ್ಟು ಸ್ಥಾನಮಾನ
ಹೆಣ್ಣಾದರಂತೂ ಅವಳಗತಿ ಕೇಳುವರಿಲ್ಲಣ್ಣ
ಸಂಸಾರ ರಂಗದಲೂ ನಗಣ್ಯರು

ಎಲ್ಲ ಪ್ರಕಾರದಲೂ ಬರೆಯ ಹೊರಟರೂ ಇವರು
ಏನನುಭವ? ಎಂಬ ತಾತ್ಸಾರ ಶಿಕ್ಷೆ
ಇಲ್ಲದವಕಾಶಕ್ಕೆ ಸೆಣಸಿ ಕೋರಿಕೆ ಇಡಲು
ಔದಾಸೀನ್ಯದಿಂದುದ್ಭವಿಸಿದ ಔದಾರ್ಯ ಭಿಕ್ಷೆ
ಸಾಹಿತ್ಯ ಕ್ಷೇತ್ರದಲೂ ನಗಣ್ಯರು.

ಫಲಿತಾಂಶದಲಿ ಕೂಡ ಮೇಲುಗೈಯಾದರೂ
ಮೀಸಲಾತಿ ಎಂಬ ಮೂದಲಿಕೆಯು
ನೇರ ಹೋರಾಟದಲಿ ಗೆಲುವ ಛಾತಿ ಇರಲು
ಮೀರಲಾರದ ಗಡಿ ಲಕ್ಷ್ಮಣರೇಖೆಯು
ಉದ್ಯೋಗ ರಂಗದಲೂ ನಗಣ್ಯರು

ಸಿಂಗರಿಸಿದಶ್ವವನೆ ಮುಂದಿಟ್ಟು ಹೊರಟಂತೆ
ಅಶ್ವಮೇಧಕೆ ಸಿದ್ಧರಾದಂತೆ
ಪರಾಕು ಕೇಳುವವರೆಗೂ ಪಥದಲ್ಲಿ ಮುಂದಾಳು
ಪತನವಾದ ನಂತರ ಶೂನ್ಯಹಾಳು
ಸಾಮಾಜಿಕವಾಗಿಯೂ ನಗಣ್ಯರು.

○ ಪ್ರಭಾಮಣಿ ನಾಗರಾಜ

# " ಕಮಲಹಾಸನ್ ತರ ಇದ್ರೆ "

○ ಜಿ. ವಿ. ವೇದವಲ್ಲಿ

ಮಹಿಳೆಯ ಮನಸ್ಸಿಗೆ ನಿಲುಕದ ಮಾತು. ಮನಸ್ಸಿನಲ್ಲಿ ಮೆಲುಕು ಹಾಕುವ ನೂರಾರು ಅನಿಸಿಕೆಗಳನ್ನು ಗಂಡು ಅಂದು, ಆಡಿ ಸಹಜವೆಂಬಂತೆ ಮನಸ್ಸಿನಲ್ಲೂ, ಹೊರಗೂ ನಿರ್ಭಿಡೆಯಿಂದ ನುಡಿದು ಸಂತೋಷಿಸುತ್ತಾನೆ. ಹೆಣ್ಣು ತಮಾಷೆಗೂ, ಗಂಡು ಬಿಟ್ಟ ವಾಗ್ಬಾಣಕ್ಕೆ ತಿರುಗುಬಾಣವಾಗಿ ಬಿಟ್ಟ ಮಾತುಗಳಿಗೆ ಪುರುಷರು ನಿಷ್ಠೂರಿಯಾಗುತ್ತಾರೆ. ತಾಳ್ಮೆ ಕಳೆದುಕೊಂಡು ಕಟುಕನಾಗಿ ಹೆಂಡತಿಯನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಹಿಂಸಿಸುತ್ತಾನೆ.

ಆತನಿಗೆ 41 ವರ್ಷ. ಆಕೆಗೆ 33 ವರ್ಷ ವಯಸ್ಸು. ಮೂರು ಮಕ್ಕಳ ತಂದೆ ತಾಯಿಂದಿರು. ಆಕೆ ಲಕ್ಷಣವಾದ ಗೋಧಿ ಬಿಳುಪಿನ ಸ್ತ್ರೀ. ಆತ ಲಕ್ಷಣವಂತನಾದರೂ, ಬಣ್ಣದಲ್ಲಿ ಶ್ರೀಕೃಷ್ಣ. ಇಬ್ಬರೂ 12 ವರ್ಷಗಳನ್ನು ಜೊತೆಯಾಗಿ ಸವೆಸಿದ್ದರು. ಆಗ ತಾನೆ ಹೊಸದಾಗಿ ಬಂದ ಸಿನಿಮಾ ಸಾಗರ ಸಂಗಮ ಚಲನ ಚಿತ್ರವನ್ನು ಗಂಡ ನೋಡಿ ಬಂದಿದ್ದರು. ಒಂದು ದಿನ ಹೆಂಡತಿ ಗಂಡನಿಗೆ ಊಟ ಬಡಿಸುತ್ತಿರುವಾಗ, ಸಿನಿಮಾದ ಗುಂಗಿನಲ್ಲಿದ್ದ ಗಂಡ "ನೋಡೆ, ಹೆಂಗಸರು ಇದ್ರೆ ಜಯಾಪ್ರದಾಳ ಹಾಗಿರಬೇಕು" ಎಂದರು. ತಕ್ಷಣ ಹೆಂಡತಿಗೆ ಎಳೆದು ಕುಕ್ಕಿದಂತಾಗಿ, ನೆಮ್ಮದಿ ಕದಡಿದಂತಾಗಿ ಮನಸ್ಸು ಬಹುವಾಗಿ ತಳಮಳಿಸಿತು. 'ಛೆ' ಈ ಗಂಡಸರೇ ಇಷ್ಟು, ಎಷ್ಟು ಸೇವೆ ಮಾಡಿ ಚನ್ನಾಗಿ ನೋಡಿಕೊಂಡರು, ಅವರ ಬುದ್ಧಿಯನ್ನು ತೋರಿಸುತ್ತಾರೆ. "ನನಗೆ ಏನು ಕಡಿಮೆಯಾಗಿದೆ, ಮೂರು ಮಕ್ಕಳ ತಾಯಿಯಾದರೂ ನನ್ನನ್ನು ನೋಡಿದವರೆಲ್ಲಾ, ಈಗಲೂ ನಿನ್ನನ್ನು ಹಸೆಮಣೆಯ ಮೇಲೆ ಕೂಡಿಸಬಹುದು ಎನ್ನುತ್ತಾರೆ. ಇವರಿಗೆ ನನಗಿಂತಾ ಜಯಪ್ರದಾಳೆ ಚೆನ್ನಾಗಿ ಕಾಣುತ್ತಾಳೆ. ನಾನೇನು ಅವಳ ಹಾಗೆ ಕೃತಕ ಮೇಕಪ್, ಗೀಕಪ್ ಮಾಡಿಕೊಳ್ಳುವುದಿಲ್ಲ" ಎಂದೆಲ್ಲಾ ಯೋಚಿಸುತ್ತಾ ಅಂದಿನ ರಾತ್ರಿಯಿಡೀ ನಿದ್ದೆಯಿಲ್ಲದೆ ಆಕಡೆ, ಈಕಡೆ ಹೊರಳಿದ್ದೆ ಹೊರಳಿದ್ದು. ಮರುದಿನ ಮನಸ್ಸಿನಲ್ಲಿ ಕಸಿವಿಸಿಯಾಗು ತ್ತಿದ್ದರೂ, ಎಲ್ಲ ಕೆಲಸಗಳನ್ನು ಮುಗಿಸಿ ಗಂಡನಿಗೆ ಸಿಟ್ಟಿನಲ್ಲೇ ಡಬ್ಬಿ ಕಟ್ಟಿ, ಹೊಟ್ಟೆಗಿಷ್ಟು ಹಾಕಿ, ಮಕ್ಕಳನ್ನು ಶಾಲೆಗೆ ಕಳಿಸಿ ತನ್ನ ಆತ್ಮೀಯ ಗೆಳತಿಗೆ ವಿಷಯವನ್ನು ತಿಳಿಸಿ ಬಹುವಾಗಿ ನೊಂದುಕೊಂಡಳು.

ಆಕೆಯ ಗೆಳತಿ "ಅಯ್ಯೋ ತೆಗೀರಿ, ನೀವ್ ಯಾಕೆ ಬೇಜಾರು ಮಾಡಿಕೊಳ್ತೀರಾ"? ನಿಮಗಿಂತ ಹೆಂಡತಿ ಬೇಕಂತಾ" ಎನ್ನುತ್ತಾ ಸಮಾಧಾನಗೊಳಿಸಿದಳು, ಆತ್ಮೀಯ ಗೆಳತಿ.

"ಸುಮ್ಮ ಸುಮ್ಮನೆ ಏನೇನೋ ಮಾತನಾಡಿದ್ರೆ ನಮ್ಮ ಮನಸ್ಸಿಗೆ ಎಷ್ಟು ನೋವಾಗುತ್ತೆ ಅನ್ನುವುದನ್ನು ಅವರಿಗೂ ತೋರಿಸಿ ಕೊಡಬೇಕು ರೀ" ಎಂದರು ಈಕೆ "ಅದೇ ನಾನು ಯೋಚನೆ ಮಾಡ್ತಾ ಇದ್ದೀನಿ" ಎಂದರು ಗೆಳತಿ. ಇಬ್ಬರು ಹಿಗ್ಗಾ ಮುಗ್ಗಾ ಯೋಚಿಸಿ ಯೋಚಿಸಿ ಒಂದು ತೀರ್ಮಾನಕ್ಕೆ ಬಂದರು. ಮಾಡಬೇಕಾಗಿದ್ದನ್ನು ತೀರ್ಮಾನಿಸಿದ ಮೇಲೆ ಅವರಿಗೆ ಸ್ವಲ್ಪ ಸಮಾಧಾನವಾಯಿತು. ಆಕೆ ಅದನ್ನು ಕಾರ್ಯರೂಪಕ್ಕೆ ತರುವ ಸಂತೋಷದಲ್ಲಿ ಬೇಗ ಬೇಗ ಮನೆಯ ಎಲ್ಲಾ ಕೆಲಸಗಳನ್ನು ಮುಗಿಸಿ ರಾತ್ರಿಗಾಗಿ ಕಾಯುತ್ತಾ ಕುಳಿತರು.

ಎಂದಿನಂತೆ ರಾತ್ರಿ ಪತಿರಾಯರಿಗಾಗಿ ಪ್ರೀತಿಯಿಂದ ಊಟ ಬಡಿಸುತ್ತಾ "ರೀ ನೀವು ನಿನ್ನೆ ಜಯಪ್ರದಾ ವಿಷಯ ಹೇಳಿದ ಮೇಲೆ ನನಗೂ ಒಂದು ಯೋಚನೆ ಬಂತು" ಎಂದಳು ಹೆಂಡತಿ.

'ಹೌದಾ ಏನದು'?

"ಏನೂ ಇಲ್ಲ, ಗಂಡಸರ ಮೈಮಾಟ ಎಂದ್ರೆ ಕಮಲಹಾಸನ್ ತರ ಇರಬೇಕು ಅಲ್ವೇನ್ರಿ" ಎಂದಳು ಹೆಂಡತಿ.

ಹೆಂಡತಿಯ ಮಾತನ್ನು ಕೇಳಿ ಗಂಡ ದುರ್ವಾಸ ಮುನಿಯಾದರು. ದುರ್ವಾಸ ಮುನಿಯಾದರೂ ವಾಸಿ. ಊಟದ ತಟ್ಟೆಯನ್ನು ಪಕ್ಕಕ್ಕೆ ತಳ್ಳಿ, ಕಣ್ಣು ಕೆಂಪಗೆ ಮಾಡಿಕೊಂಡು ಇನ್ನೇನು ನಾಲ್ಕು ಬಾರಿಸಿ ಬಿಡುವರೇನೋ ಎನ್ನುವಷ್ಟು ರೋಷದಿಂದ ಮಾತನಾಡದೆ ಹೊರಗೆ ನಡೆದುಬಿಟ್ಟರು. ಆಮೇಲೆ ಮಾತಿಲ್ಲ, ಕತೆಯಿಲ್ಲ. ಗಂಡನ ಅವತಾರವನ್ನು ನೋಡಿ ಹೆಂಡತಿ ಗಾಬರಿಯಾದಳು. ಹೆದರಿಕೆಯಿಂದ ಮುಳ್ಳಿನ ಮೇಲೆ ಕುಳಿತಂತೆ ಎರಡು ದಿನ ಕಳೆದಳು. ಗಂಡ ಹೆಂಡಿರ ನಡುವೆ ಮಾಮೂಲು ಸ್ಥಿತಿ ಉಂಟಾಗಲು ಇನ್ನೆರಡು ದಿನ ಹಿಡಿದವು. ಗಂಡಸರ ಅಸಂಬದ್ಧವಾದ ಮಾತನ್ನು ತಮಾಷೆಗಾದರೂ ಸಹಿಸಬೇಕು, ನಿಜವಾದರೂ ಸಹಿಸಬೇಕು. ಆದರೆ ಹೆಂಗಸು ತಮಾಷೆಗೆ ಅಥವಾ ಯಾವ ಒಳಾರ್ಥವೂ ಇಲ್ಲದೆ, ಪುರುಷರ ಮಾತಿಗೆ ಪ್ರತ್ಯುತ್ತರವಾಗಿ ನೀಡಿದ ಮಾತು ಸಹಿಸಲು ಅಸಾಧ್ಯವಾಗುತ್ತದೆ. ವಿಕೋಪಕ್ಕೆ ತಿರುಗಿ ಅವರನ್ನು ಹಂಗಿಸುವ ಅನುಮಾನಿಸುವ ಅಸ್ತ್ರವಾಗಿ ಪರಿಣಮಿಸುತ್ತದೆ.

●

## ಕಣ್ಣಾರೆ ಕಂಡರೂ.......

ಒಬ್ಬ ಗಂಡು ಮದುವೆಯಾಗಿ ಒಂದು ಮಗುವಾದ ಬಳಿಕ ಮೊದಲ ಹೆಂಡತಿಗೆ ವಂಚಿಸಿ ಇನ್ನೊಂದು ಮದುವೆಯಾಗಲು ಸಂಚು ನಡೆಸಿ, ತಯಾರಿ ಮಾಡುತ್ತಾನೆ. ಆ ಊರು ಬಿಟ್ಟು ಪರ ಊರಿನಲ್ಲಿ ಹೆಣ್ಣು ನೋಡಿ ವರದಕ್ಷಿಣೆ ಪಡೆದು ತಾಳಿ ಕಟ್ಟಲು ಹವಣಿಸುತ್ತಾನೆ. ಆಗ ಮೊದಲ ಹೆಂಡತಿ ಮಗುವಿನ ಸಮೇತ ಆರಕ್ಷಕರೊಡನೆ ಮಧ್ಯೆ ಪ್ರವೇಶಿಸಿ ಆ ಮದುವೆಯನ್ನು ರದ್ದುಗೊಳಿಸುತ್ತಾಳೆ. ಇಂಥ ದೃಶ್ಯವನ್ನು ನಾವು ಚಲನಚಿತ್ರದಲ್ಲಿ, ಕತೆ, ಕಾದಂಬರಿಗಳಲ್ಲಿ ನೋಡುತ್ತೇವೆ, ಓದುತ್ತೇವೆ. ಈಗಾಗಲೇ ಸಾಕಷ್ಟು ನೋಡಿದ್ದೇವೆ, ಓದಿದ್ದೇವೆ. ಅಂಥ ಘಟನೆಯನ್ನು ಪ್ರತ್ಯಕ್ಷ ನೋಡಿದ ನಮ್ಮ ಬಂಧುಗಳು ಹೇಳಿದ್ದನ್ನು ಕೇಳುವ ದೌರ್ಭಾಗ್ಯ ನನ್ನದಾಯಿತು.

ಮಡಿಕೇರಿಯಲ್ಲಿರುವ ಬಂಧುಗಳು ಒಂದು ಬೆಳಗ್ಗೆ ನಮ್ಮ ಮನೆಗೆ ಇಲ್ಲಿಯ ಛತ್ರದಲ್ಲಿ ಮದುವೆಗೆ ಹೋಗುವ ಸಲುವಾಗಿ ಬಂದರು. ನಮ್ಮೊಂದಿಗೆ ಬೇಕಾದಷ್ಟು ಮಾತಾಡಿ ಮಧ್ಯಾಹ್ನ ೧೨.೧೫ ಗಂಟೆಗೆ ಮದುವೆ ಛತ್ರಕ್ಕೆ ಹೋದರು. ನಾವು ಒಂದು ಗಂಟೆಗೆ ಊಟಕ್ಕೆ ಕೂರಲು ತಯಾರಿ ನಡೆಸುತ್ತಿದ್ದಾಗ ಆ ಬಂಧುಗಳು ವಾಪಾಸಾಗಿ ಇಂದು ನನ್ನ ಅನ್ನದ ಋಣ ಇಲ್ಲಿಯೇ ಎಂದು ಒಳಗೆ ಬಂದರು. ಊಟ ಮಾಡುತ್ತ ಅಲ್ಲಿ ನಡೆದ ಕತೆಯನ್ನು ಹೇಳಿದರು. ಮುಂದೆ ಅವರ ಮಾತಿನಲ್ಲೆ ಓದಿ.

* * *

ನಾನು ಮದುವೆ ಛತ್ರಕ್ಕೆ ತಲುಪಿದಾಗ ಹೆಣ್ಣಿನ ಕಡೆಯವರು ಸಾಮಾನನ್ನು ಕಾರಿಗೆ ಹಾಕುತ್ತಿದ್ದರು. ಜನ ಹೆಚ್ಚು ಇರಲಿಲ್ಲ. ನನಗೆ ಸಂಶಯ ಬಂತು. ಏನು ಇವತ್ತು ಮದುವೆ ನಡೆಯುವುದಿಲ್ಲವೇ? ಎಂದು ಅವರನ್ನು ಕೇಳಿದೆ.

"ನೀವು ಯಾರ ಕಡೆಯಿಂದ ಬಂದಿದ್ದೀರಿ?"

ನಾನು ಗಂಡಿನ ಕಡೆಯವನು ಎಂದು ಉತ್ತರ ಕೊಟ್ಟೆ.

"ನೋಡಿ ಸ್ವಾಮಿ ಅವನು ಇಂಥ' ಹಲ್ಕ ಕೆಲಸ ಮಾಡಬಹುದೆ?"

ಏನಾಯಿತು? ಎಂದೆ ಅರ್ಧ ಗಾಬರಿಯಿಂದ.

"ನಿನ್ನೆ ರಾತ್ರಿ ವರಪೂಜೆ ನಡೆಯುತ್ತಿರುವಾಗ ಆರಕ್ಷಕರು ಒಂದು ಹೆಂಗಸು ಮತ್ತು ಮಗು ಜೊತೆ ಬಂದು 'ನೋಡಿ, ಈ ಗಂಡಿಗೆ ಮೊದಲೇ ಮದುವೆಯಾಗಿ ಮಗುವೂ ಇದೆ. ನಿಮ್ಮನ್ನು ವಂಚಿಸಿ ಮದುವೆಯಾಗುತ್ತಿದ್ದಾನೆ. ಹುಡುಗನ ನಡತೆ ಸರಿ ಇಲ್ಲ. ಈ ಹೆಂಗಸೇ ಇವನ ಪತ್ನಿ. ಇದಕ್ಕೆ ನಮ್ಮಲ್ಲಿ ಸಾಕ್ಷಿ, ಪುರಾವೆ ಇಲ್ಲ. ನಂಬುವುದು ಬಿಡುವುದು ನಿಮಗೆ ಸೇರಿದ್ದು. ಮದುವೆ ಮಾಡುವುದಾದರೆ ನಮ್ಮ ಅಡ್ಡಿ ಇಲ್ಲ. ನಿಮ್ಮ ಮಗಳ ಜೀವನದ ಪ್ರಶ್ನೆ ಇದು. ಆಲೋಚನೆ ಮಾಡಿ' ಎಂದರು. ಆದರೆ ಮದುವೆ ಗಂಡು, 'ನನಗೆ ಇವಳು ಯಾರೆಂದು ಗೊತ್ತಿಲ್ಲ. ಅವಳನ್ನು ನಾನು ಇದೇ ಮೊದಲಸಲ ಇಲ್ಲೇ ನೋಡುತ್ತಿರುವುದು' ಎಂದು ವಾದಿಸಿದ. ಆದರೆ ನಮಗೆ ಮಗಳನ್ನು ಇವನಿಗೆ ಕೊಟ್ಟು ಮದುವೆ ಮಾಡಲು ಧೈರ್ಯ ಬರಲಿಲ್ಲ. ಹಾಗಾಗಿ ಮದುವೆ ರದ್ದುಪಡಿಸಿದೆವು. ಅವನ ತಂದೆ ದೂರವಾಣಿಸಿ 'ನೀವು ಯಾರು ಯಾರದೋ ಮಾತನ್ನು ಕೇಳಿ ಮದುವೆ ನಿಲ್ಲಿಸಿದ್ದು ಸರಿಯಲ್ಲ, ನನ್ನ ಮಗ ಅಂಥವನಲ್ಲ' ಎಂದು ದಬಾಯಿಸಿದರು. ಏನು ಮಾಡಲಿ ಸ್ವಾಮಿ. ನಮಗಾದ ಆಘಾತ, ಖರ್ಚು, ಶ್ರಮ ಇವನ್ನು ತುಂಬಿಕೊಡಲು ಸಾಧ್ಯವೇ? ಮಗಳ ಮನಸ್ಸಿಗೆ ಆಘಾತವಾಗಿದೆ" ಎಂದು ತಮ್ಮ ದುಃಖವನ್ನು ಹೇಳಿಕೊಂಡರು.

ನೀವು ಮದುವೆ ನಿಲ್ಲಿಸಿ ಬಹಳ ಒಳ್ಳೆಯ ಕೆಲಸ ಮಾಡಿದಿರಿ. ಅದಕ್ಕಾಗಿ ನಾನು ನಿಮ್ಮನ್ನು ಅಭಿನಂದಿಸುತ್ತೇನೆ. ಅಂಥ ಅಯೋಗ್ಯನಿಗೆ ನಿಮ್ಮ ಮಗಳನ್ನು ಕೊಡುವ ಪ್ರಸಂಗ ತಪ್ಪಿದ್ದು ಒಳ್ಳೆಯದೇ ಆಯಿತು. ನೀವು ಮದುವೆ ನಿಶ್ಚಯ ಮಾಡಿದಾಗ ಹುಡುಗನ ಬಗ್ಗೆ ವಿಚಾರಿಸಲಿಲ್ಲವೇ?

"ಇಲ್ಲ. ಹುಡುಗ ನೋಡಲು ಲಕ್ಷಣವಾಗಿದ್ದಾನೆ, ಚೆನ್ನಾಗಿ ಮಾತಾಡಿದ. ನಮಗೆ ಸಂಶಯ ಬರಲೇ ಇಲ್ಲ. ಸಭ್ಯಸ್ಥರೆಂದೇ ಭಾವಿಸಿದ್ದೆವು."

ನಿಮ್ಮ ಮಗಳು ಕೆಲಸದಲ್ಲಿದ್ದಾಳೆಯೇ?

"ಹೌದು ಬಿಎಸ್ಸಿ ಓದಿ ಖಾಸಗಿ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾಳೆ."

ಆದದ್ದೆಲ್ಲ ಒಳ್ಳೆಯದಕ್ಕೆ ಎಂದು ತಿಳಿಯಿರಿ. ನಿಮ್ಮ ಮಗಳಿಗೆ ಗುಣ ನಡತೆಯಿರುವ ಗಂಡು ಸಿಗಲಿ ಎಂದು ಹಾರೈಸುತ್ತೇನೆ. ಮದುವೆಗೆ ಮೊದಲೇ ಅವನ ಕಲ್ಯಾಣಗುಣಗಳು ಗೊತ್ತಾದ್ದರಿಂದ ನಿಮ್ಮ ಮಗಳ ಬಾಳು ಉಳಿಯಿತು ಎಂದು ಸಂತೋಷಪಡಿ ಎಂದು ಸಮಾಧಾನದ ಎರಡು ಮಾತಾಡಿ ನಾನು ಬಂದೆ.

ಅವನಿಗೆ ಮದುವೆಯಾಗಿ ಒಂದು ಮಗು ಇದೆ ಎಂದು ಎಲ್ಲ ಮಾತಾಡುತ್ತಿದ್ದರು. ಆದರೆ ಸರಿಯಾಗಿ ವಿವರ ತಿಳಿದಿರಲಿಲ್ಲ. ಅವನು ನಮ್ಮ ಮನೆಗೆ ಬಂದು 'ನೀವು ಮದುವೆಗೆ

ಬರಲೇ ಬೇಕು' ಎಂದು ಕರೆದಿದ್ದ. ಚಿಕ್ಕವನಿರುವಾಗಲೇ ನೋಡಿದ ಹುಡುಗನಲ್ಲವೇ ಎಂದು ಮದುವೆಗೆ ಬಂದೆ. ಕತೆ ಹೀಗಾಯಿತು. ಮಡಿಕೇರಿಯಲ್ಲೂ ಆರತಕ್ಷತೆ ಇಟ್ಟು ಸುಮಾರು ಜನರನ್ನು ಕರೆದಿದ್ದ. ಅಲ್ಲಿ ಇನ್ನೇನು ಕತೆ ಕಟ್ಟಿ ಹೇಳುತ್ತಾನೊ ಗೊತ್ತಿಲ್ಲ. ನಾನು ಮದುವೆಗೆ ಬಂದ ಕಾರಣ ನಿಜ ಸಂಗತಿ ತಿಳಿಯಿತು. ಇಲ್ಲದಿದ್ದರೆ ಅವನು ಮದುವೆ ರದ್ದಾದ್ದಕ್ಕೆ ಬೇರೇನೋ ಕಾರಣ ಕೊಡುತ್ತಿದ್ದ. ಅದನ್ನೇ ನಾನು ನಂಬಬೇಕಿತ್ತು.

* * *

ನಮ್ಮ ಸಮಾಜದಲ್ಲಿ ಇಂಥವರೂ ಇದ್ದಾರೆ. ಗಂಡು ಹೆಣ್ಣಿಗೆ ಮದುವೆ ಮಾಡುವಾಗ ಬಲು ಎಚ್ಚರವಿರಬೇಕು. 'ಹೇಳಿದ್ದು ಸುಳ್ಳಾಗಬಹುದು; ನೋಡಿದ್ದು ಸುಳ್ಳಾಗಬಹುದು; ನಿಧಾನಿಸಿ ಯೋಚಿಸಿದಾಗ ನಿಜವು ತಿಳಿಯುವುದು' ಎಂಬುದನ್ನು ಮರೆಯಬಾರದು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡದೆ ಮದುವೆ ಮಾಡಬಾರದು.

ಹೆಣ್ಣು ನಿರಂತರವಾಗಿ ಶೋಷಣೆಯಿಂದಲೇ ಬಾಳಬೇಕಾಗಿದೆ. ಇಲ್ಲಿ ಮೋಸ ಮಾಡಿದ ಗಂಡು ಇನ್ನೊಂದು ಊರಿಗೆ ಹೋಗಿ ಈಗಾಗಲೇ ಇನ್ನೊಂದು ಹೆಣ್ಣನ್ನು ವಂಚಿಸಿ ರಾಜಾರೋಷವಾಗಿ ಮದುವೆಯಾಗಿರಬಹುದು. ಆದರೆ ಶೋಷಿಸಲ್ಪಟ್ಟ ಹೆಣ್ಣು ಮಾನಸಿಕವಾಗಿ ಎಷ್ಟು ನೊಂದಿರಬಹುದು. ಮನಸ್ಸಿಗಾದ ಆಘಾತ ಮಾಯಲು ಬಹಳ ವೇಳೆ ಬೇಕು. ಈ ಶೋಷಣೆಗೆ ಕೊನೆ ಎಂದು? ನಮ್ಮ ಹೆಣ್ಣು ಹೆತ್ತವರು ಯಾವಾಗ ಎಚ್ಚೆತ್ತುಕೊಳ್ಳುವುದು? ಗಂಡು ಸಿಕ್ಕಿದರೆ ಸಾಕು ಅವನು ಎಂಥವನಾದರೂ ಪರವಾಗಿಲ್ಲ, ಒಂದು ಗಂಡೆಂದಾದರೆ ಆಯಿತು ಎಂದು ತಮ್ಮ ಮಗಳನ್ನು ಕೊಟ್ಟು ಮದುವೆ ಮಾಡಿ ಕೈತೊಳೆದುಕೊಳ್ಳುವುದಲ್ಲ. ಅವನ ಪೂರ್ವಪರ ವಿಚಾರಿಸಿ ಮದುವೆ ಮಾಡಬೇಕು. ಆಗ ಮಾತ್ರ ಹೆಣ್ಣಿಗೆ ನೆಮ್ಮದಿಯ ಬಾಳು ದೊರೆಯಬಹುದು.

○ ಮಾಲಾ

*ಮಾನಸದ ಪ್ರಕಟಣೆ ಮಾನಸದ ಓದುಗರ ಆರ್ಥಿಕ ನೆರವನ್ನು ಅವಲಂಬಿಸಿದೆ. ಓದುಗರು ಚಂದಾ ನವೀಕರಣದ ಸೂಚನೆ ಬಂದ ಕೂಡಲೇ ಚಂದಾ ನವೀಕರಿಸಿ ಸಹಕರಿಸಬೇಕೆಂದು ಕೋರುತ್ತೇವೆ.*

*ಸಂ. ಮಂಡಲಿ*

## "ಅಜ್ಜನ ಹೆಜ್ಜೆ"

ಸ್ವಚ್ಛಂದ ಗಾಳಿಗೆ ಮೈಯೊಡ್ಡಲು
ಸಾಗುತ್ತಾರತ್ತಲವರೆಲ್ಲರೂ
ಉಳಿದವರು ನಾವೇ!
"ಅಜ್ಜ ಅಜ್ಜಿ ಜತೆಗೆ ನಾನು

ಸುರಿವ ಬೆವರೊರೆಸಿದ ಸೆರಗ ಸೊಂಟಕ್ಕೆ ಸಿಕ್ಕಿಸಿ
ಬಗ್ಗಿದ ಬೆನ್ನು ಮೇಲಾಗಲು ಗೆಳೆಯ
ಗಡಿಯಾರ ಹನ್ನೆರಡೇ ಬಡಿಯ ಬೇಕು!

ಉಜ್ಜಿದ ನೆಲವನ್ನೇ, ಉಜ್ಜಿ ಉಜ್ಜಿ! ಮುಂದೂಡಿದ
ಕನಸುಗಳ ನನಸಿನ ನವರೂಪತೆ
ನಿತ್ಯವೂ ನಡೆದಿದೆ ನನ್ನದೇ ಯತ್ನ
ಸದ್ದು ಹೊಡೆದಂತೆ ಮತ್ತದೇ ಅಜ್ಜನ ಪಾದಗಳು
ಹೆಜ್ಜೆಯೂರಿ ಪ್ರತಿಮೆಗಳಾಗಿವೆ.

ಹಳೆಯ ಸರಕುಗಳಲ್ಲಿ ಕಳೆದು ಹೋಗುವ
ನನ್ನ ನಾನೇ ಹುಡುಕಲು
ಸುತ್ತಿದವಶೇಷಗಳ ಪ್ರಶ್ನಿಸಿ
ಮಾಳಿಗೆಗೂ ನಡುಮನೆಗೂ ಎಡ ತಾಕಿ
ನೊಂದ ಮನಕೆ ಕಿಂಡಿಯಲಿ ಕಂಡ
ರವಿ ಪ್ರಖರತೆ ಪುಳಕದ ಹೊಂಬೆಳಕ ನೀಡಿದೆ

ಬಗಿದ ಕಟ್ಟುಗಳ ಒಂಟಿ ತಪಸ್ವಿ
ಮೂಲೆ ಹಿಡಿದ ಕಸ ಪೊರಕೆ, ಧ್ಯಾನಸ್ಥರಲು
ಕಿಸಕ್ಕೆನ್ನುತ್ತದೆ, ನನ್ನೀ ಹೊಸ ಭಾವಕೆ
ದಿಗಂತದ ಕರಗಿದ ಕಾರ್ಮೋಡ
ತುಂಬುವುದು ಆತ್ಮಬಲ ಸಾಧನೆಯ ಛಲ
ಜತೆಗೂಡಿದೆ "ಯತ್ನ"
ತುಂಬಲು ಶ್ವಾಸಕೋಶದ ಹೊಸಗಾಳಿ
ಅಳಿಸಲು ಅಜ್ಜನ ಹೆಜ್ಜೆಗಳ
ಹಲವು ಧಾಳಿ.

○ *ಸುಶೀಲಾ ಸೋಮಶೇಖರ್*
ಸಕಲೇಶಪುರ

# ದಿಟ್ಟ ಹೆಜ್ಜೆ

○ ಪ್ರತಿಭಾ ಭಟ್ಟ, ನೀರ್ಗಾನ್

ಇದು ಒಂದು ಸತ್ಯಘಟನೆ. ನಾನು ನನ್ನ ಗೆಳತಿ ಒಮ್ಮೆ ಒಂದು ಸಿನೇಮಾಕ್ಕೆ ಹೋಗಿದ್ದೆವು. ಚಲನಚಿತ್ರದಲ್ಲಿ ಅತ್ತೆ ಸೊಸೆಗೆ ಚಿತ್ರ ವಿಚಿತ್ರವಾದ ಹಿಂಸೆ ನೀಡುತ್ತಿದ್ದಳು. ಅದನ್ನು ನೋಡಿದ ನಾನು ನನ್ನ ಗೆಳತಿಗೆ "ಇದೆಲ್ಲ ಬರೀ ಚಲನಚಿತ್ರ, ಕಥೆ, ಕಾದಂಬರಿಗಳಲ್ಲಿ ಮಾತ್ರ ಸಾಧ್ಯ, ನಿಜಜೀವನದಲ್ಲಿ ಇದೆಲ್ಲಾ ನಡೆಯುವುದಿಲ್ಲ. ಬರೀ ಬಂಡಲ್" ಎನ್ನುತ್ತಾ ನಕ್ಕಾಗ, ನನ್ನ ಪಕ್ಕದಲ್ಲಿ ಕುಳಿತ ಮಹಿಳೆಯೊಬ್ಬಳು "ಇಲ್ಲಾ ಇಂತಹ ಅತ್ತೆಯರೂ ಇದ್ದಾರೆ. ನಾನೇ ಇಂತಹ ಹಿಂಸೆಗಳನ್ನು ಅತ್ತೆಯಿಂದ ಅನುಭವಿಸಿರುವೆ ಎಂದು ಹೇಳಿದಳು. ನನಗೆ ಆಶ್ಚರ್ಯವಾಯಿತು. ಇದು ಅವಳೇ ಹೇಳಿದ ಅವಳ ಬಾಳಿನ ನೋವಿನ ಕಥೆ. ನನ್ನ ತಾಯಿಯ ಮನೆ ಶಿರಸಿಯ ಸಮೀಪದ ಒಂದು ಹಳ್ಳಿ. ನನಗೆ ಆ ಮಹಿಳೆಯ ಪರಿಚಯ ಈ ಮೊದಲು ಇಲ್ಲದಿದ್ದರೂ, ಅವಳ ಕಥೆ ಕೇಳಬೇಕೆಂದು ಕುತೂಹಲ ಮೂಡಿತು. ಏಕೆಂದರೆ ಅವಳು ನನ್ನ ತಾಯಿ ಮನೆಯಿಂದ ಮೂರು ಕಿಲೋಮೀಟರ್ ದೂರದ ಒಂದು ಮನೆಗೆ ಒಮ್ಮೆ ಸೊಸೆಯಾಗಿ ಬಂದಿದ್ದಳು. ಮದುವೆಯಾಗಿ ಆರು ತಿಂಗಳಿಗೆ ಗಂಡನಿಂದ ವಿಚ್ಛೇದನ ಪಡೆದಿದ್ದಳು. ಆ ಆರು ತಿಂಗಳಲ್ಲಿ ಅವಳು ಗಂಡನ ಮನೆಯಿಂದ ಹೊರ ಬಂದದ್ದು ಒಮ್ಮೆ ಮಾತ್ರ. ಹಾಗಾಗಿ ಊರಿನವರ್‍ಯಾರಿಗೂ ಅವಳ ಪರಿಚಯವಿರಲಿಲ್ಲ. ನನಗೆ ಅನಿರೀಕ್ಷಿತವಾಗಿ ಸಿಕ್ಕಿದ ಆಕೆ. ಚಲನಚಿತ್ರ ಮುಗಿಯುವುದರೊಳಗೆ ತನ್ನ ಕಥೆಯನ್ನು ಸಂಕ್ಷಿಪ್ತವಾಗಿ ತಿಳಿಸಿದಳು. ಅದನ್ನೇ ನಾನು ಬರೆದಿರುತ್ತೇನೆ.

ಹದಿನೆಂಟರ ಹರೆಯದಲ್ಲಿ ಆಕೆಯ ಮದುವೆಯಾಯಿತು. ಮನೆಯಲ್ಲಿ ಇರುವವರೆಂದರೆ ಗಂಡ, ಅತ್ತೆ, ಮಾವ. ಮಾವ ಗೋವಿನಂತೇ ಸಾಧು ಸ್ವಭಾವದವನು. ಅತ್ತೆಯಾದರೋ ರಾಕ್ಷಸಿ, ಗಯ್ಯಾಳಿ ಇತ್ಯಾದಿ. ಗಂಡನಿಗೆ ತಾಯಿಯ ಮಾತೇ ವೇದವಾಕ್ಯ. ಇಂತಹ ಮನೆಗೆ ಸೊಸೆಯಾಗಿ ಬಂದ ಅವಳಿಗೆ 5-6 ತಿಂಗಳಲ್ಲೇ ನರಕದರ್ಶನವಾಯಿತು. ಮಾವನು ಯಾವಾಗಲೂ "ಪರೋಪಕಾರರ್ಥಂ ಇದಂ ಶರೀರಂ" ಎನ್ನುತ್ತಾ ಸಹಾಯ ಕೇಳಿ ಬಂದವರಿಗೆ ಇಲ್ಲವೆನ್ನದೇ, ಜೀವನ ನಡೆಸುತ್ತಿದ್ದನು. ಬೆಳಿಗ್ಗೆ ಮನೆ ಬಿಟ್ಟರೆ, ಸಂಜೆಯೇ ಮನೆಗೆ ಬರುವುದು. ಮನೆಯಲ್ಲಿರುವ ಅತ್ತೆ ಮತ್ತು ಗಂಡ ಇವಳಿಗೆ ನಾನಾರೀತಿಯ ಕಿರುಕುಳ ನೀಡುತ್ತಿದ್ದರು. ಕೈ ತುಂಬಾ ಕೆಲಸ ಮಾಡಿಸಿಕೊಂಡು ತಂಗಳನ್ನವನ್ನು ಅದೂ ಅರೆ ಹೊಟ್ಟೆ ತುಂಬುವಷ್ಟು ಊಟ ಹಾಕುತ್ತಿದ್ದರು. ಅವರಿಗೆ ಹೊರಗೆಲ್ಲಾದರೂ ಹೋಗಬೇಕಾದಾಗ ಇವಳನ್ನು ಒಂದು ಕೋಣೆಯೊಳಗೆ ಕೂಡಿಹಾಕಿ ಬೀಗ ಹಾಕಿಕೊಂಡು ಹೋಗುತ್ತಿದ್ದರು. ಆಗೆಲ್ಲಾ ಹಗಲು ಪೂರ್ತಿ ಉಪವಾಸ ಇರಬೇಕಾಗುತ್ತಿತ್ತು. ಅಕ್ಕ ಪಕ್ಕದವರು ಕೂಡ ಇವರ ಮನೆಗೆ ಬರಲು ಅಂಜುತ್ತಿದ್ದರು. ಇವಳ ಅತ್ತೆಯ ಬಾಯಿ ತುಂಬಾ ಕೆಟ್ಟದ್ದಾಗಿತ್ತು. ತಮ್ಮ ಮಾನ ಮರ್ಯಾದೆಗೆ ಕುಂದು ಬರುತ್ತದೆಯೆಂದು ಯಾರೂ ಬರುತ್ತಿರಲಿಲ್ಲ. ಮದುವೆಯಾದ ಐದಾರು ತಿಂಗಳಲ್ಲಿ ದಾಂಪತ್ಯ ಸುಖವೆಂದರೇನೆಂದು ಅವಳಿಗೆ ಗೊತ್ತೇ ಇರಲಿಲ್ಲ. ಗಂಡ ತಾಯಿಯ ಮಾತು ಕೇಳಿ ಹೆಂಡತಿಯಿಂದ ದೂರವೇ ಇರುತ್ತಿದ್ದ. ರಾತ್ರಿಯೂ ಅತ್ತೆಯೆನ್ನುವವಳು ಮಗನಿಗೆ ಬೇರೆ ರೂಮಿನಲ್ಲಿ ಮಲಗಲು ಆಜ್ಞೆ ಮಾಡುತ್ತಿದ್ದರು. ಈ ಹೆಣ್ಣಿಗೆ ತಾನು ಮಾಡಿದ ತಪ್ಪೇನೆಂದು ತಿಳಿದಿರಲಿಲ್ಲ. ಪ್ರಶ್ನಿಸಲು ಹೆದರಿಕೆ.

ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿ ಬೆಳೆದ ಅವಳು ಗಂಡನ ಮನೆಯೇ ಸರ್ವಸ್ವವೆಂದುಕೊಂಡಿದ್ದಳು. ಅವಳ ತವರಿನವರು ಎರಡೂ ಮೂರು ಸಾರಿ ಹಬ್ಬಕ್ಕೆ ಕರೆಯಲು ಬಂದಾಗ, ಅತ್ತೆ "ನಾವು ಅವಳನ್ನು ಕಳಿಸುವುದಿಲ್ಲ. ಮದುವೆಯಾದ ಮೇಲೆ ನಾವು ಹೇಳಿದಂತೇ ಅವಳು ಕೇಳಬೇಕು" ಎಂದು ಹೇಳಿ ಕಳಿಸಿದ್ದರು. ಮಾವನಿಗೆ ಈ ವಿಷಯಗಳು ಕೆಲವು ದಿನ ತಿಳಿದಿರಲೇ ಇಲ್ಲ. ತಿಳಿದಾಗ ಹೆಂಡತಿಯ ಬಳಿ ಕೇಳಲಾರ. ಅವಳು ಅದನ್ನೇ ದೊಡ್ಡದಾಗಿ ಮಾಡಿ ಮರ್ಯಾದೆ ಕಳೆಯುತ್ತಾಳೆಂಬ ಹೆದರಿಕೆ. ಅಪರೂಪಕ್ಕೆ ಮನೆಯಲ್ಲಿ ಇರುವಾಗ, ಹೆಂಡತಿ, ಮಗ ಇಲ್ಲದಾಗ. ಸೊಸೆಗೆ ಕುಡಿಯಲು ತಿನ್ನಲು ಏನಾದರೂ ಕಿಟಕಿಯಿಂದಲೇ ನೀಡುತ್ತಿದ್ದನು. ಅವಳ ಮದುವೆಯಾದ 4-5 ತಿಂಗಳಿಗೆ ಅತ್ತೆ, ಒಮ್ಮೆ ಸೊಸೆಯನ್ನು ವೈದ್ಯರ ಬಳಿ ಕರೆದೊಯ್ದಿದ್ದಳು. ಅದೂ ಸೊಸೆ ಇನ್ನೂ ಗರ್ಭಿಣಿ ಆಗಲಿಲ್ಲವೆಂದು, ತೋರಿಸಲು. (ಮಗನನ್ನು ಹೆಂಡತಿಯ ಬಳಿ ಹೋಗಬಾರದೆಂದು ಆಜ್ಞೆ ಮಾಡಿದವಳೂ ಅವಳೇ) ವೈದ್ಯರು ಏನು ಹೇಳಿದರೋ ಗೊತ್ತಿಲ್ಲ. ಆದರೆ ಅತ್ತೆ ತನ್ನ ಸೊಸೆ ಬಂಜೆಯೆಂದು ಊರೆಲ್ಲ ಸಾರಿದಳು.

ಹೀಗೆ ಐದಾರೂ ತಿಂಗಳು ಕಳೆಯಿತು. ಆ ಹೆಣ್ಣಿನ ತವರಿನವರಿಗೆ ಈ ವಿಷಯಗಳೆಲ್ಲಾ ತಿಳಿದು, ಪೊಲೀಸರಿಗೆ

ದೂರು ಕೊಟ್ಟರು. ಅಂತೂ ಪೋಲೀಸರ ಸಹಾಯದಿಂದ ಅವಳನ್ನು ಆ ಮನೆಯೆಂಬ ನರಕದಿಂದ ಪಾರು ಮಾಡಿದರು. ಗಂಡನಿಂದ ವಿಚ್ಛೇದನ ಕೊಡಿಸಿದರು. ಧೈರ್ಯವಾಗಿಯೇ ಅವಳು, ವಿಚ್ಛೇದನ ಪಡೆದು, ಕೆಲಕಾಲ ತವರಿನಲ್ಲೇ ಕಳೆದಳು. ಅವಳ ಒಳ್ಳೆಯ ಸ್ವಭಾವ ಹಾಗೂ ಧೈರ್ಯವನ್ನು ಮೆಚ್ಚಿದ ಒಬ್ಬ ವಿಶಾಲ ಮನದ ಹುಡುಗ ಮದುವೆಯಾಗಿ ಹೊಸ ಬಾಳನ್ನು ನೀಡಿದನು. ಈಗವರಿಗೆ ಇಬ್ಬರು ಮಕ್ಕಳು, ತುಂಬಾ ಸಂತೋಷದಿಂದ ಇದ್ದಾರೆ. ಇದಿಷ್ಟು ಅವಳು ಹೇಳಿದ ಕಥೆ.

ಹೆಣ್ಣು ಮಕ್ಕಳು, ತಮಗಾಗುತ್ತಿರುವ ಹಿಂಸೆಯಿಂದ, ಧೈರ್ಯವಾಗಿ ಹೊರಬಂದು ಬದುಕಲು ಕಲಿಯಬೇಕು. "ಯಾರು ಏನೇ ಹೇಳಿಕೊಳ್ಳಲಿ. ಬಾಳುವವರು ನಾವು" ಎಂದು ಕೊಂಡು, ಹೇಡಿಯಾಗದೇ "ಮುಂದೆ ನಮಗೆ ಸುಂದರ ಬದುಕು ಕಾದಿದೆ" ಎಂಬ ಆಶಾಭಾವದಿಂದ ದಿಟ್ಟ ಹೆಜ್ಜೆ ಇಡಬೇಕು. ಇದಕ್ಕೆ ಅವರಿಗೆ ತವರಿನವರೂ, ಆತ್ಮೀಯರೂ ಸಹಕಾರ ನೀಡಬೇಕು. ಶೋಷಣೆಯನ್ನು ಖಂಡಿಸಬೇಕು. ಅಂತಹ ಗಂಡ ಅತ್ತೆಯರಿರುವುದಕ್ಕಿಂತಲೂ, ಮದುವೆಯಾಗದಿದ್ದರೂ ತೊಂದರೆ ಇಲ್ಲ. ಎಲ್ಲ ಅಡೆತಡೆಗಳನ್ನು ಮೀರಿ ಬೆಳೆಯಬೇಕು.

●

---

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ.**

**ಸಂಸ್ಥೆಗಳಿಗೆ : 100 ರೂ.**

*ಸಂ. ಮಂಡಳಿ*

REGD No. CPMG/KA/BGE/289/2001

BOOK -POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067